2. Government reserves the right to withdraw or cancel the award and also remove the name of the award winner, individuals/teams/organizations from the Register of Awards.
3. All the individuals/teams/organizations to whom awards have been announced under this scheme shall execute an agreement as in Annexure-I before receiving the award. The agreement inter-alia provides for return of the award bestowed in case the award-winner's name/team/organization's name is subsequently removed from the Register of awards.
4. All the individual/team/organization's who have been awarded under this scheme, are not eligible for any claim, special consideration, relief, privilege or any facilities under any scheme of the Government / Boards / Company / Corporation / Authority / Statutory bodies.
5. The details of awards withdrawn or re-bestowed shall be published in the Karnataka Gazette.

This order issues with the concurrence of Finance Department vide note No. FD/270/Exp-12/10, dated: 18.06.2010.

By Order and in the name of the Governor of Karnataka

**Abdul Rahaman**
Under Secretary to Government,
DPAR-AR (Training).

**Annexure – I To G.O. No. DPAR 92 AAR 2009, Dated: 08.07.2010**

**A G R E E M E N T**

I, Sri…………………………………………………………………………. Recipient of the Award under the Challenge Fund Scheme, hereby declare that I/We have read and understood the terms and conditions relating to the Award. I hereby, undertake that in case the Award is withdrawn and my name is removed or cancelled from the Register of Award, the award so received/accepted by me/our team/our organization will be returned to Government.

Signatures of the Recipient
of the Awards.

Dated:

Witness:

1)

2)

**Annexure-2 To G.O. No: DPAR 92 AAR 2009, Dated: 08.07.2010**

1. Concise structure of proposal in brief.
2. To which of the objective specified in para(2) of the guidelines does the proposal relate.
3. In what manner is the proposal vendor neutral.
4. List out the performance parameters indicating the baseline of the scheme, and how it will be measured.
5. State the method of scalability of the proposal.
6. Is exemption under KTPP Act required or not. If required, reasons to be provided.
7. Arrangements proposed for third party evaluation of the proposal.
8. Cost of the proposal.
9. Administrative structure for implementation (being a pilot project, creation of staff would not be expected).
10. Implementation of the projects shall be through concerned Government Departments/Government agencies only.

**ABDUL RAHAMAN**

P.R. 1827

Under Secretary to Government,
DPAR-AR (Training).

**ಕಂದಾಯ ಸಚಿವಾಲಯ**

**ವಿಷಯ :** ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ, ಹಿಂದಿನ ತಹಶೀಲ್ದಾರ್, ನೆಲಮಂಗಲ ತಾಲ್ಲೂಕು ಇವರು ಲೋಕಾಯುಕ್ತ ಜಾಲಕ್ಕೆ ಸಿಲುಕಿರುವ ಕುರಿತು – ಆರೋಪದಿಂದ ಮುಕ್ತಗೊಳಿಸುವ ಬಗ್ಗೆ.

**ಓದಲಾಗಿದೆ :**
1) ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೋಲೀಸ್, ಪೊಲೀಸ್ ವಿಂಗ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರದ ಸಂ: Lok/INV(G)/BD-5/Cr-2/2000/BLR, Dt: 15–02–2000.
2) ಅಪರ ಆರಕ್ಷಕ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರ ಪತ್ರದಸಂ: Lok/INV(G)/ಆ–5/ಅಡಿ–2/2000/BLR, Dt: 10–07–2000.
3) ಸರ್ಕಾರದ ಆದೇಶ ಸಂ: ಕಂಇ 04 ಎಡಿಇ 2000, ದಿನಾಂಕ: 30–09–2000.
4) ಸರ್ಕಾರದ ಆದೇಶ ಸಂ: ಕಂಇ 04 ಎಡಿಇ 2000, ದಿನಾಂಕ 22–12–2000.
5) ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ ಇವರ ಮನವಿ ದಿನಾಂಕ: 03/05–01–2001.
6) ಸರ್ಕಾರದ ಆದೇಶ ಸಂ: ಕಂಇ 04 ಎಡಿಇ 2000, ದಿನಾಂಕ: 09–03–2001.
7) ಪ್ರಿನ್ಸಿಪಲ್ ಸೆಷನ್ಸ್ ಜಡ್ಜ್, ಬೆಂಗಳೂರು ಅವರ ಆದೇಶದ ದಿನಾಂಕ: 06–01–2009.

8) ಪೊಲೀಸ್ ಅಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಪತ್ರದ ದಿನಾಂಕ: 22–4–2010.

**ಪ್ರಸ್ತಾವನೆ :**

ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೋಲೀಸ್, ಪೊಲೀಸ್ ವಿಂಗ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ಕ್ರ.ಸಂ.(1)ರ ದಿನಾಂಕ: 15–02–2000ರಲ್ಲಿ ಸರ್ಕಾರಕ್ಕೆ ವರದಿ ಸಲ್ಲಿಸಿ, ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ, ಹಿಂದಿನ ತಹಶೀಲ್ದಾರ್, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರನ್ನು ದಿನಾಂಕ: 27–01–2000 ದಂದು ಮಾನ್ಯ ಲೋಕಾಯುಕ್ತ ಇವರು ಟ್ರಾಪ್ ಮಾಡಿರುವ ಸಂಬಂಧ, ಪ್ರಸ್ತುತ ಪ್ರಕರಣದಲ್ಲಿ ನೆಲಮಂಗಲ ತಾಲ್ಲೂಕು, ತ್ಯಾಮಗೊಂಡ್ಲು ಹೋಬಳಿ ವ್ಯಾಪ್ತಿಯ ಗೋವೇನಹಳ್ಳಿ ಗ್ರಾಮದ ಸರ್ವೆ ಸಂ. 2/3 ಜಮೀನಿನಲ್ಲಿ ಇರುವ ಪಹಣಿ ಕಲ್ಲನ್ನು ಫಿರ್ಯಾದುದಾರರಾದ ದೊಡ್ಡಪ್ಪ ಇವರು ಕಿತ್ತು ಹಾಕಿರುವರೆಂದು, ಆ ಕಲ್ಲನ್ನು ಪುನಃ ನಡೆಸುವ ವಿಷಯಕ್ಕೆ ಸಂಬಂಧಿಸಿದಂತೆ, ವಿವಾದಾಸ್ಪದ ಈ ಪ್ರಕರಣ ಪರಿಶೀಲನೆ ನಂತರ, ಸದರಿ ಕಲ್ಲನ್ನು ನೆಡಲು ಆದೇಶವಾಗಿರುತ್ತದೆ. ಲೋಕಾಯುಕ್ತರ ವರದಿಯ ಪ್ರಕಾರ ಶ್ರೀಮತಿ ಭಾಗ್ಯವತಮ್ಮ ಇವರು ಟ್ರ್ಯಾಪ್ ಪ್ರಕರಣದಲ್ಲಿ ಸಿಕ್ಕಿಕೊಂಡು, ಇವರು ಹಣವನ್ನು ಮುಟ್ಟದೇ ಇದ್ದ ಪ್ರಯುಕ್ತ ಅವರ ಕೈ ಪರೀಕ್ಷೆಯ ಫಲಿತಾಂಶ ನೆಗೆಟೀವ್ ಆಗಿದ್ದು, ಅವರು ಪಡೆದಿದ್ದಾರೆಂದು ಆರೋಪಿಸಲಾದ ಹಣವು ರೂ. 1,000/– ಅವರ ಮೇಜಿನ ಮೇಲೆ ಸಿಕ್ಕಿರುವುದರಿಂದ, ಅವರ ವಿರುದ್ಧ ಮೇಲ್ನೋಟಕ್ಕೆ ಆರೋಪ ಕಂಡು ಬಂದಿರುವುದರಿಂದ, ಲೋಕಾಯುಕ್ತರು, ಈ ಅಧಿಕಾರಿಯನ್ನು ಅಮಾನತ್ತಿನಲ್ಲಿರಿಸಿ, ಅವರ ಹುದ್ದೆಯ ಲೀನ್ ಬೇರೆ ಕಡೆ ನೀಡಲು ಹಾಗೂ ಇವರ ವಿರುದ್ಧ ಮುಕ್ತ ವಿಚಾರಣೆ ನಡೆಸಲು, ಲೋಕಾಯುಕ್ತ, ಅಡಿಷನಲ್ ಡೈರೆಕ್ಟರ್ ಆಫ್ ಪೊಲೀಸ್ ಇವರು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ.(2)ರ ದಿನಾಂಕ: 10.07.2000ರಲ್ಲಿ ಅಪರ ಆರಕ್ಷಕ ಮಹಾನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ ಕಛೇರಿ, ಇವರು ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ ಇವರು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ತಾಲ್ಲೂಕಿನಲ್ಲಿ ತಹಶೀಲ್ದಾರರಾಗಿದ್ದಾಗ, ಸೋವೇನಹಳ್ಳಿ ಗ್ರಾಮದ ಸಂ: 2/3ರ ಜಮೀನಿನ ವ್ಯವಹಾರದ ಬಗ್ಗೆ ಅನುಕೂಲ ಮಾಡಿಕೊಡಲು ಫಿರ್ಯಾದುದಾರರಾದ ಶ್ರೀ ತಿಮ್ಮಯ್ಯನವರಿಂದ ಅಕ್ರಮ ಸಂಭಾವನೆಯನ್ನು ಸ್ವೀಕರಿಸುತ್ತಿದ್ದರೆಂಬ ಆಪಾದನೆಯು ಮೇಲು ನೋಟಕ್ಕೆ ಸಾಬಿತಾಗಿದ್ದರಿಂದ, 1988ರ ಭ್ರಷ್ಟಾಚಾರ ವಿರೋಧ ಕಾಯ್ದೆಯ ಕಲಂ 7 ಮತ್ತು 13(1)(ಡಿ) ಪ್ರಕರಣದ ಜೊತೆಯಲ್ಲಿ ಓದಲಾದ 13(2) ಪ್ರಕರಣದ ಅಧೀನ ಆಧಾರಗಳ ವಿಚಾರಣೆಗೆ ಸಕ್ಷಮ ಅಧಿಕಾರ ವ್ಯಾಪ್ತಿಯಾದ ನ್ಯಾಯಾಲಯದಲ್ಲಿ ಸದರಿ ಆರೋಪಿತರೆಂದು ಹೇಳಲಾದ ಅಧಿಕಾರಿಗಳ ವಿರುದ್ಧ ಮೊಕದ್ದಮೆ ಹೂಡಲು ಸರ್ಕಾರದ ಮಂಜೂರಾತಿಯನ್ನು ನೀಡಲು ಕೋರಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ.(3)ರ ದಿನಾಂಕ: 30–09–2000ರ ಸರ್ಕಾರದ ಆದೇಶದಲ್ಲಿ, ಅಪರ ಆರಕ್ಷಕ ಮಹಾನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ ಕಛೇರಿ, ಇವರು ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ ಇವರ ಅಪರಾಧಗಳ ವಿಷಯದಲ್ಲಿ ಸಕ್ಷಮ ಅಧಿಕಾರವುಳ್ಳ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿರುತ್ತದೆ.

ಮೇಲೆ ಓದಲಾದ ಕ್ರ.ಸಂ.(4)ರ ದಿನಾಂಕ: 22–12–2000ರ ಆದೇಶದಲ್ಲಿ, ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ, ಹಿಂದಿನ ತಹಶೀಲ್ದಾರ್, ನೆಲಮಂಗಲ ಇವರನ್ನು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 10(1)ರನ್ವಯ ಸದರಿಯವರ ವಿರುದ್ಧ, ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಸೇವೆಯಿಂದ ಅಮಾನತ್ತುಗೊಳಿಸಿ, ಆದೇಶಿಸಿರುತ್ತದೆ.

ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ ಇವರು ಮೇಲೆ ಓದಲಾದ ಕ್ರ.ಸಂ. (5)ರ ದಿನಾಂಕ: 03/05–01–2001 ರಲ್ಲಿ ಸರ್ಕಾರಕ್ಕೆ ಮನವಿ ಸಲ್ಲಿಸಿ, ಸೇವೆಗೆ ಪುನರ್ ನೇಮಿಸಲು ಆದೇಶ ಮಾಡಬೇಕೆಂದು ಕೋರಿರುತ್ತಾರೆ.

ಸದರಿ ಅಧಿಕಾರಿಯ ಮನವಿಯನ್ನು ಪರಿಶೀಲಿಸಿ, ಸರ್ಕಾರವು ಮೇಲೆ ಓದಲಾದ ಕ್ರ.ಸಂ. (6)ರ ದಿನಾಂಕ: 09–03–2001ರ ಆದೇಶದಲ್ಲಿ, ಸದರಿ ಅಧಿಕಾರಿ ವಿರುದ್ಧ ಇಲಾಖಾ ವಿಚಾರಣೆ ಕಾಯ್ದರಿಸಿ, ಅಮಾನತ್ತಿನಿಂದ ಬಿಡುಗಡೆಗೊಳಿಸಿ, ಸದರಿಯವರನ್ನು ಸೇವೆಗೆ ಪುನರ್ ನೇಮಿಸಿ, ಸದರಿಯವರ ಸೇವೆಯನ್ನು ಬೆಂಗಳೂರು ಸಮೂಹ ಕ್ಷಿಪ್ರ ಸಾರಿಗೆ ನಿಗಮದಲ್ಲಿ (ಬಿ.ಎಂ.ಆರ್.ಟಿ.ಎಲ್) ವಿಶೇಷ ತಹಶೀಲ್ದಾರ್ ಹುದ್ದೆಗೆ ನೇಮಿಸಲು ಇವರ ಸೇವೆಯನ್ನು ನಗರಾಭಿವೃದ್ಧಿ ಇಲಾಖೆಗೆ ನೀಡಲಾಗಿತ್ತು.

ಗೌರವಾನ್ವಿತ ಸೆಷನ್ಸ್ ಜಡ್ಜ್, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಅವರ ಮೇಲೆ ಓದಲಾದ ಕ್ರ.ಸಂ. (7)ರ ಆದೇಶದ ದಿನಾಂಕ: 06–01–2009 ರಲ್ಲಿ ಕೇಸ್ ಸಂ: ಸ್ಪೆಷಲ್ ಸಿ.ಸಿ. ನಂ: 36/2004 ರ ಕುರಿತಂತೆ, ನ್ಯಾಯಾಲಯದಲ್ಲಿ ವಿಚಾರಣೆಯು ಶ್ರೀಮತಿ ಭಾಗ್ಯವತಮ್ಮ, ಹಿಂದಿನ ತಹಶೀಲ್ದಾರ್, ನೆಲಮಂಗಲ ತಾಲ್ಲೂಕು ಇವರ ವಿರುದ್ಧದ ಆಪಾದನೆಗಳಿಂದ ದೋಷಮುಕ್ತಗೊಳಿಸಿ ಆದೇಶಿಸಿರುತ್ತದೆ.

ಪೊಲೀಸ್ ಅಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ಮೇಲೆ ಓದಲಾದ ಕ್ರ.ಸಂ.(8)ರ ದಿನಾಂಕ: 22–04–2010ರ ಪತ್ರದಲ್ಲಿ ಶ್ರೀಮತಿ ಭಾಗ್ಯವತಮ್ಮ, ಹಿಂದಿನ ತಹಶೀಲ್ದಾರ್, ನೆಲಮಂಗಲ ತಾಲ್ಲೂಕು ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದಲ್ಲಿನ ನ್ಯಾಯಾಲಯವು ನೀಡಿರುವ ತೀರ್ಪಿನ ವಿರುದ್ಧ ಸರ್ಕಾರವು ಮೇಲ್ಮನವಿ ಸಲ್ಲಿಸದಿರಲು ತೀರ್ಮಾನಿಸಿದೆ ಎಂದು ತಿಳಿಸಿರುತ್ತಾರೆ.

ನ್ಯಾಯಾಲಯವು ನೀಡಿರುವ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಶ್ರೀಮತಿ ಭಾಗ್ಯವತಮ್ಮ ಇವರ ವಿರುದ್ಧ ಆರೋಪಗಳಿಂದ ಮುಕ್ತಗೊಳಿಸಿರುವುದನ್ನು ಒಪ್ಪಿ, ಪ್ರಕರಣವನ್ನು ಮುಕ್ತಾಯಗೊಳಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 04 ಎಡಿಇ 2000 ಬೆಂಗಳೂರು, ದಿನಾಂಕ: 02–07–2010**

ಪ್ರಸಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ, ಹಿಂದಿನ ತಹಶೀಲ್ದಾರ್, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಪ್ರಸ್ತುತ ತಹಶೀಲ್ದಾರ್, ಬಿ.ಎಂ.ಟಿ.ಎಫ್, ಬೆಂಗಳೂರು ಇವರ ವಿರುದ್ಧ ದಾಖಲಾದ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದಲ್ಲಿನ ಆರೋಪಗಳಿಂದ ದೋಷಮುಕ್ತಗೊಳಿಸಿ ಹಾಗೂ ಈ ಹಿಂದೆ ಅಮಾನತ್ತಿನಲ್ಲಿಟ್ಟ ಅವಧಿಯನ್ನು ಕರ್ತವ್ಯದ ಅವಧಿ ಎಂದು ಪರಿಗಣಿಸಿ ಆದೇಶಿಸಿದೆ.

ಪಿ.ಆರ್. 1828

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಶಿವಮೊಗ್ಗ ನಗರದ ರೈಲು ಮಾರ್ಗದಲ್ಲಿ ಬರುವ ಎಲ್.ಸಿ. ಸಂಖ್ಯೆ : 48ರ ಬದಲಿಗೆ ರಸ್ತೆ ಮೇಲು ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣದ ಕಾಮಗಾರಿಗೆ ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಪತ್ರ ಸಂ. ಮೂಅಇ 103 ರಾರಾಹೆ 06, ದಿನಾಂಕ : 4–7–2008.

2) ಸರ್ಕಾರದ ಆದೇಶ ಸಂಖ್ಯೆ : ಮೂಅಇ 17 ರಾರಾಹೆ 10, ದಿನಾಂಕ : 12–3–2010.

3) ಮುಖ್ಯ ಇಂಜಿನಿಯರ, ಸಂಪರ್ಕ ಮತ್ತು ಕಟ್ಟಡ (ದ), ಲೋಕೋಪಯೋಗಿ ಇಲಾಖೆ, ಬೆಂಗಳೂರು ರವರ ದಿನಾಂಕ : 29–6–2010ರ ಪತ್ರ ಸಂಖ್ಯೆ : ಸಿ.ಬಿ.ಎಸ್.ಹಭಪ:34:ಹಭಪ 5465: 2010–11.

**ಪ್ರಸ್ತಾವನೆ :–**

ಶಿವಮೊಗ್ಗ ನಗರದ ರೈಲು ಮಾರ್ಗದಲ್ಲಿ ಬರುವ ಎಲ್.ಸಿ. ಸಂಖ್ಯೆ: 48ರ ಬದಲಿಗೆ ರಸ್ತೆ ಮೇಲು ಸೇತುವೆ ಹಾಗೂ ಅಪ್ರೋಚ್ ರಸ್ತೆ ನಿರ್ಮಾಣಕ್ಕೆ ತಗಲುವ ಒಟ್ಟಾರೆ ವೆಚ್ಚ ರೂ. 18.19 ಕೋಟಿಗಳ ಪರಿಷ್ಕೃತ ಅಂದಾಜಿಗೆ ತಗಲುವ ಒಟ್ಟಾರೆ ಮೊತ್ತದ ಶೇ. 50 ರಷ್ಟನ್ನು ರೈಲ್ವೆ ಇಲಾಖೆಯಿಂದ ಪಡೆಯುವ ಷರತ್ತಿಗೊಳಪಟ್ಟು ಕಾಮಗಾರಿಯನ್ನು ಲೋಕೋಪಯೋಗಿ ಇಲಾಖೆಯಿಂದ ಕೈಗೆತ್ತಿಕೊಳ್ಳಲು ಮೇಲೆ ಓದಲಾದ (1)ರ ಸರ್ಕಾರಿ ಪತ್ರದಲ್ಲಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿತ್ತು.

2. ಎಲ್.ಸಿ. ಸಂಖ್ಯೆ 48ರಲ್ಲಿ ರಸ್ತೆ ಮೇಲು ಸೇತುವೆಗೆ ಕೂಡು ರಸ್ತೆ ನಿರ್ಮಿಸುವ ಕಾಮಗಾರಿನ್ನು ಪ್ರಾರಂಭಿಸಲು ಸ್ಥಳದಲ್ಲಿರುವ ವಿದ್ಯುತ್ ಕಂಭಗಳ ಸ್ಥಳಾಂತರ ಮತ್ತು ಅರಣ್ಯ ಇಲಾಖೆಗೆ ಸಂಬಂಧಿಸಿದ ಮರಗಳನ್ನು ಕಡಿತಕ್ಕೆ ಹಾಗೂ ಯುಟಿಲಿಟಿ ಸ್ಥಳಾಂತರಕ್ಕೆ ರೂ. 2.00 ಕೋಟಿಯನ್ನು ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಬಿಡುಗಡೆ ಮಾಡಲಾಗಿತ್ತು.

3. ವಿದ್ಯುತ್ ಕಂಬಗಳ ಸ್ಥಳಾಂತರದ ಹಾಗೂ ಇತರೆ ಬಿಲ್ಲಿನ ಮೊತ್ತವನ್ನು ನಿಗದಿತ ಅವಧಿಯಲ್ಲಿ ಸಲ್ಲಿಸದೇ ಇರುವುದರಿಂದ ಮೇಲ್ಕಂಡ ಕಾಮಗಾರಿಗೆ ಬಿಡುಗಡೆ ಮಾಡಲಾದ ಮೊತ್ತವನ್ನು ದಿನಾಂಕ 31–3–2010 ರೊಳಗಾಗಿ ರೂ. 53,76,921/–ಗಳನ್ನು ಮಾತ್ರ ವೆಚ್ಚವಾಗಿದ್ದು, ಉಳಿದ ಮೊತ್ತವನ್ನು ಭರಿಸಲು ಸಾಧ್ಯವಾಗದೇ ಇರುವುದರಿಂದ ಲ್ಯಾಪ್ಸ ಆಗಿರುತ್ತದೆ ಎಂದು ಕಾರ್ಯಪಾಲಕ ಅಭಿಯಂತರರು ನೀಡಿರುವ ವರದಿಯು ಸಮಂಜಸವಾಗಿದೆ ಎಂದು ತಿಳಿಸುತ್ತಾ, ಸದರಿ ಕಾಮಗಾರಿಯನ್ನು ಪ್ರಾರಂಭಿಸಲು ರೂ. 2.00 ಕೋಟಿ ಮೊತ್ತವನ್ನು ಬಿಡುಗಡೆ ಮಾಡಬೇಕೆಂದು ಮೇಲೆ ಓದಲಾದ (3)ರ ಪತ್ರದಲ್ಲಿ ಮುಖ್ಯ ಇಂಜಿನಿಯರವರು (ದ) ಕೋರಿರುತ್ತಾರೆ.

4. ಈ ಅಂಶಗಳೆಲ್ಲವನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಅದೇಶ ಸಂಖ್ಯೆ : ಮೂಅಇ 17 ರಾರಾಹೆ 2010, ಬೆಂಗಳೂರು, ದಿನಾಂಕ : 14–7–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶಿವಮೊಗ್ಗ ನಗರದ ರೈಲು ಮಾರ್ಗದಲ್ಲಿ ಬರುವ ಎಲ್.ಸಿ. ಸಂಖ್ಯೆ: 48ರ ಬದಲಿಗೆ ರಸ್ತೆ ಮೇಲು ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣದ ಕಾಮಗಾರಿಗೆ ರೂ. 2.00 ಕೋಟಿಯನ್ನು (ಎರಡು ಕೋಟಿ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಿದೆ. ಸದರಿ ಮೊತ್ತವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ **"5465–01–190–3–04–(ಯೋಜನೆ)–211 ಬಂಡವಾಳ"** ಇದರ ಅಡಿಯಲ್ಲಿ ರಸ್ತೆ ಮೇಲು ಸೇತುವೆ/ಕೆಳಸೇತುವೆಗಳ ನಿರ್ಮಾಣಕ್ಕೆ ಒದಗಣೆ ಮಾಡಿರುವ ರೂ. 30.00 ಕೋಟಿಗಳಿಂದ ಭರಿಸುವುದು. ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಬಂದರು ಮತ್ತು ಒಳನಾಡು, ಜಲಸಾರಿಗೆ ಇಲಾಖೆ, ಶಿವಮೊಗ್ಗ ವಿಶೇಷ ವಿಭಾಗ, ಶಿವಮೊಗ್ಗ ಇವರು ಸವಿವರ ಸಾದಿಲ್ವಾರು ಬಿಲ್ಲಿನ ಮೂಲಕ ಸೆಳೆದು ಸಂಬಂಧಪಟ್ಟವರಿಗೆ ಖಜಾನೆ ಚೆಕ್ ಮೂಲಕ ಪಾವತಿಸತಕ್ಕದ್ದು.

2. ಈ ಆದೇಶವನ್ನು ದಿನಾಂಕ : 16–5–2008 ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2008 ಸರ್ಕಾರಿ ಆದೇಶದಲ್ಲಿ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರದತ್ತವಾಗಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್.ವೇಣುಗೋಪಾಲ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)

ಪಿ.ಆರ್. 1829 ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ಹೆಬ್ಬಾಳ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾದ :** ಸರ್ಕಾರದ ಆದೇಶ ಸಂಖ್ಯೆ : ವಇ 42 ಹೆಚ್‌ಎಎಂ 1999, ದಿನಾಂಕ 10–5–2000.

**ಪ್ರಸ್ತಾವನೆ :–**

ಸರ್ಕಾರವು ರಾಜ್ಯ ವಿವಿಧ ನಗರ ಸ್ಥಳೀಯ ಸಂಸ್ಥೆಗಳಲ್ಲಿ ನಗರ/ಪಟ್ಟಣ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ರಚಿಸಲು ಆದೇಶಿಸಿದೆ. ಕೆಲವು ಸ್ಥಳೀಯ ಸಂಸ್ಥೆಗಳಲ್ಲಿ ಅಧಿಕಾರೇತರ ಸದಸ್ಯರ ನಾಮನಿರ್ದೇಶನವಾಗಬೇಕಾಗಿದ್ದು, ಇಂಥ ಸ್ಥಳೀಯ ಸಂಸ್ಥೆಗಳಲ್ಲಿ ನಗರ/ಪಟ್ಟಣ ಆಶ್ರಯ ಸಮಿತಿ ಕಾರ್ಯನಿರ್ವಹಿಸುತ್ತಿಲ್ಲ. ನಗರ ಆಶ್ರಯ ಯೋಜನೆಯಡಿಯಲ್ಲಿ ಫಲಾನುಭವಿಗಳ ಆಯ್ಕೆ ತಕ್ಷಣವೇ ಪ್ರಾರಂಭವಾಗಬೇಕಾಗಿರುವುದರಿಂದ, ಅಧಿಕಾರೇತರ ಸದಸ್ಯರ ನಾಮನಿರ್ದೇಶನ ಬಾಕಿ ಇಟ್ಟು, ಈ ಕೆಳಗಿನಂತೆ ನಗರ/ಪಟ್ಟಣ ಆಶ್ರಯ ಸಮಿತಿ ರಚಿಸಿ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 212 ಹೆಚ್‌ಎಎಸ್ 2010, ಬೆಂಗಳೂರು, ದಿನಾಂಕ : 4ನೇ ಜೂನ್2010**

ಹೆಬ್ಬಾಳ ನಗರ ಆಶ್ರಯ ಸಮಿತಿಯನ್ನು ಈ ಕೆಳಕಂಡಂತೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಪುನರ್‌ರಚಿಸಲಾಗಿದೆ.

| | | |
|---|---|---|
| **1.** | ವಿಧಾನ ಸಭಾ ಕ್ಷೇತ್ರವನ್ನು ಪ್ರತಿನಿಧಿಸುವ ವಿಧಾನ ಸಭಾ ಸದಸ್ಯರು | ಅಧ್ಯಕ್ಷರು |
| **2.** | ಆ ಪ್ರದೇಶದ ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| **3.** | ಸ್ಥಳೀಯ ಸಂಸ್ಥೆಯ ಮಹಾಪೌರರು/ಅಧ್ಯಕ್ಷರು ಅಥವಾ ಅವರ ಪ್ರತಿನಿಧಿ | ಸದಸ್ಯರು |

| | | |
|---|---|---|
| 4. | ಸಂಬಂಧಪಟ್ಟ ಕಂದಾಯ ವಿಭಾಗದ ಉಪ ವಿಭಾಗಾಧಿಕಾರಿ | ಸದಸ್ಯರು |
| 5. | ತಾಲ್ಲೂಕಿನ ತಹಶೀಲ್ದಾರರು | ಸದಸ್ಯರು |
| 6. | ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಾಹಕ ಅಧಿಕಾರಿ | ಸದಸ್ಯರು |
| 7. | ಸ್ಥಳೀಯ ಸಂಸ್ಥೆಯ ಮುಖ್ಯಾಧಿಕಾರಿ ಅಥವಾ ಆಯುಕ್ತರು | ಸದಸ್ಯ ಕಾರ್ಯದರ್ಶಿ |

ಸಮಿತಿಯ ಅಧಿಕಾರ ಮತ್ತು ಕರ್ತವ್ಯಗಳ ಬಗ್ಗೆ ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ನೀಡಿದ ಮಾರ್ಗದರ್ಶಿಕೆಗಳನ್ನು ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ವಿ. ಕೊಂಗವಾಡ**

ಸರ್ಕಾರದ ಕಾರ್ಯದರ್ಶಿ

ವಸತಿ ಇಲಾಖೆ

ಪಿ.ಆರ್. 1830

**FOREST, ECOLOGY AND ENVIRONMENT SECRETARIAT**

**Sub :** Diversion of 10.20 ha. Of forest land in Kudrekanive SF, Hosadurga Range of Chitradurga Division for mining manganese ore in favour of M/s Jayalakshmi Minerals.

**Read :**
1. Letter No. A5 (B1) MNG.CR 59/92-93, dated 4-4-1995 of Principal Chief Conservator of Forests, Bangalore.
2. State Government Letter No. FEE 27 FFM 95, dated : 20-7-1995.
3. Letter No. F(C)A/16.1/KAR/37/MIN/1982, dated : 25-1-2007 of Government of India, Ministry of Environment and Forests, Regional Officer, Southern Zone, Bangalore.
4. Letter No. A5(1) MNG.CR. 59/93-94, Dated 29-8-2008 and 25-5-2009 of Principal Chief Conservator of Forests, Bangalore.
5. State Government letter No. FEE 39 FFM 2007, dated : 7-9-2009.
6. Letter No. F(C)A/16.1/KAR/37/MIN/7335, dated : 17-6-2010 of Government of India, Ministry of Environment and Forests, Regional Office, Southern Zone, Bangalore.

**Preamble :**

The Principal Chief Conservator of Forests, Bangalore vide his letter dated : 4-4-1995 read at (1) above has submitted the proposal to obtain the approval of Government of India under Section 2 of the Forest (Conservation) Act, 1980 for diversion 10.20 ha. of forest land in Kudrekanive SF, Hosadurga Range of Chitradurga Division for mining manganese ore in favour of M/s Jayalakshmi Minerals, for a period of 10 years, subject to the certain conditions.

The proposal of Principal Chief Conservator of Forests was recommended to Government of India, Ministry of Environment and Forests, Regional Office, Bangalore vide State Government letter dated 20-7-1995 read at (2) above seeking prior approval of Government of India under section 2 of Forests (Conservation) Act, 1980.

The Government of India, Ministry of Environment and Forests, Regional office, Bangalore vide their letter dated 25-1-2007 read at (3) above has given its approval in Principle (Stage-I) for diversion of 10.20 ha. of forest land subject to fulfillment of certain conditions and the same was communicated to the Principal Chief Conservator of Forests, Bangalore for compliance.

The Principal Chief Conservator of Forests, Bangalore vide his letters dated : 29-8-2008 and 25-5-2009 furnished the compliance report read at (4) above and the same has been sent to Government of India vide State Government letter dated : 7-9-2009 read at (5) above.

Finally Government of India Ministry of Environment and Forests, Regional Office, South Zone, Bangalore vide its letter dated 17-6-2010 read at (6) above has conveyed its final approval (Stage-II) under Section 2 of the Forest (Conservation) Act, 1980 for diversion of 10.20 ha. of forest land in Kudrekanive SF, Hosadurga Range of Chitradurga Division for mining lease in favour of M/s Jayalakshmi Minerals, for a period of 10 years, subject to the certain conditions.

The proposal has been examined in detail and hence the Order.

**GOVERNMENT ORDER NO. : FEE 39 FFM 2007, BANGALORE, DATED : 8-7-2010**

In the circumstances explained above, Government are pleased to accord sanction under Section 2 of the Forest (Conservation) Act, 1980 for diversion of 10.20 ha. of forest land in Kudrekanive SF, Hosadurga Range of Chitradurga Division for mining manganese ore in favour of M/s Jayalakshmi Minerals, for a period of 10 years, subject to the following conditions :-

1. The legal Status of the forest land shall remain unchanged.
2. The demarcation of mining lease will be done on the ground using four feet high reinforced concrete pillars with serial numbers, forward and back bearings and distance from pillar to pillar recorded on the pillars at the cost of user agency. GPS readings for the mine area shall be taken and recorded by the Forest Department.
3. The compensatory afforestation shall be raised over 10.20 ha. identified non-forest land in Sy. No. 88 of Sheeranakatte village of Hosadurga taluk, Chitradurga District at the cost of user agency. The State Government shall obtain prior permission of Central Government for change of location and schedule of compensatory afforestation, if any.

4. Non forest land for compensatory afforestation shall be notified by the State Government as P.F./R.F. and Nodal Officer (FCA) shall report the compliance within 6 months.
5. The additional amount of the Net Present Value (NPV) of the diverted forest land if any, due as per the orders of the Hon'ble Supreme Court dated : 28-3-2008 and 9-5-2008 in IA Nos. 826 in 566 with related IA's in W.P. (Civil) No. 202/1995 shall be realized from the user agency and transferred to Ad-hoc CAMPA in account number CA-1582 of Corporation Bank, Block-II, CGO Complex, Phase-I, Lodhi Road, New Delhi-110003 under intimation to the Government of India.
6. The State Government shall maintain area upto 7.5 mts. As safety zone all along the boundary and will also raise and maintain the plantation over an area, one and half times of the extent of the safety zone in degraded forest land elsewhere at the project cost.
7. The mining activity in the forest area shall be carried out as per the approved mining plan
8. No new construction of buildings for any purpose will be taken up in the forest area diverted for the project.
9. The user agency shall obtain environmental clearance under the Environment (Protection) Act, 1986.
10. The Consent of State Pollution Control Board (SPCB) shall be obtained under Air and Water Act before commencement of mining operation and it shall be renewed every year.
11. No. labour camps shall be established on the leased/diverted forest land.
12. Sufficient firewood shall be provided by the user agency to the laboureres at the project cost after purchase from the State Forest Department/Forest Development Corporation.
13. Reclamation plan shall be executed by the user agency from the very first year of mining and an annual report shall be sent to the Nodal Officer and the Regional Office, Bangalore.
14. The user agency shall protect the top soil at the project cost.
15. The user agency shall ensure that there should be no damage to the wildlife.
16. A comprehensive monitoring shall be done at the end of five years to study the impact of mining on the surrounding flora and faun a and its watershed. If it is found that the lessee has violated or is not complying with the stipulated conditions, then the approval given under the Forest (Conservation) Act, 1980 shall be revoked.
17. The total forest area utilized for the project shall not exceed 10.20 ha. In case the land is not taken over by the user agency or the same is not used for the stipulated purpose within a period of two years, then the area shall be taken back by the Forest Department.
18. Compensatory Afforestation shall be raised for at the cost of user agency over equivalent non forest land at the rate of prevailing rate. (at present Rs. 94,000/- per ha. vide G.O. No. FEE 242 FAP 09, dated : 8-1-2010).
19. The leassee shall pay usual lease rent and supervision charges.
20. The company shall protect and nurture the natural growth in the area, and shall undertake to protect rigidly.
21. The Company shall not cut the trees without prior permission of the Forest Department and all material derived from permitted fellings shall be handed over to Forest Department under cover or receipt.
22. Transportation of ore shall be strictly as per transit rules of Karnataka Forest Rules.
23. The Company shall pay royalty, taxes, as per prevailing rates of the Government from time to time, before obtaining permit from the Forest Department.
24. The Company shall execute the agreement with the Department agreeing to abide by usual terms and conditions including afforestation works necessitated for the safety of the area.
25. The lessee shall take up planting work on the static dumps during the advance mining operations.
26. The lessee shall undertake the afforestation works in other blank areas of the leased area.
27. The Lessee shall carry out soil and water conservation measures as suggested by the Forest Department.
28. The lessee shall deposit the necessary amount for the construction of retaining wall joining hillocks as a part of soil conservation measures.
29. In case of violation of any of the agreement conditions, Forest Department shall have the right to suspend the work.
30. Any other conditions to be imposed by the Government of India/Government of Karnataka and Principal Chief Conservator of Forest will have to be abided by the lessee.

By Order and in the name of the Governor of Karnataka

**H.M. Mallikaruna Swamy**
Under Secretary to Government,
Forest, Ecology and Environment Department

P.R. 1831

## ವಸತಿ ಸಚಿವಾಲಯ

**ವಿಷಯ :** 2010–11 ನೇ ಸಾಲಿನಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಮೊದಲನೇ ತ್ರೈಮಾಸಿಕ ಕಂತಿನ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಕಕೊನಿಮ, ಬೆಂಗಳೂರು ಇವರ ಪತ್ರ ಸಂಖ್ಯೆ : ಕಕೊನಿಮ/ಲೆಪಶಾ/ಅನುದಾನ : 2010–11, ದಿನಾಂಕ : 24–5–2010.

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿರವರ ಪತ್ರದಲ್ಲಿ, 2010–11ನೇ ಸಾಲಿನ ಆಯವ್ಯಯದ ಸವಿವರ ವೆಚ್ಚದ ಅಂದಾಜುಗಳ ಪುಸ್ತಕ ಸಂಪುಟ–5ರಲ್ಲಿ ರೂ. 6400.00 ಲಕ್ಷಗಳನ್ನು ಯೋಜನೆಯಡಿಯಲ್ಲಿ ಹಾಗೂ ರೂ. 3087.31 ಲಕ್ಷಗಳನ್ನು ಯೋಜನೇತರಡಿಯಲ್ಲಿ ಒಟ್ಟು ರೂ. 9481.31 ಲಕ್ಷಗಳನ್ನು ಒದಗಿಸಲಾಗಿರುವುದರಿಂದ 2010–2011ನೇ ಸಾಲಿನ ಮೊದಲನೇ ತ್ರೈಮಾಸಿಕ ಕಂತಿನ ಅನುದಾನ ಸಿಬ್ಬಂದಿ ವೆಚ್ಚಕ್ಕೆ (ಯೋಜನೆ ಮತ್ತು ಯೋಜನೇತರಡಿ) ರೂ. 159.33 ಲಕ್ಷಗಳು ಹಾಗೂ ಹುಡ್ಕೊ ಸಾಲಗಳ ಮೇಲು ಉಸ್ತುವಾರಿಗಾಗಿ ರೂ. 466.72 ಲಕ್ಷಗಳು (ಹುಡ್ಕೋ ಸಂಸ್ಥೆಯ ಬೇಡಿಕೆಯನ್ವಯ) ಒಟ್ಟು ಯೋಜನೆಯಡಿ ರೂ. 100.00 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 538.55 ಲಕ್ಷಗಳು ಒಟ್ಟು ರೂ. 638.55 ಲಕ್ಷಗಳನ್ನು ಮಂಡಳಿಗೆ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ವಿವಿಧ ಲೆಕ್ಕಶೀರ್ಷಿಕೆಗಳಡಿ ಮೊದಲನೇ ತ್ರೈಮಾಸಿಕ ಕಂತಾಗಿ ಅನುದಾನವನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 21 ಕೊಮಂಲೆ 2010, ಬೆಂಗಳೂರು, ದಿನಾಂಕ : 1–7–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ 2010–11ನೇ ಸಾಲಿಗೆ ಮೊದಲನೇ ತ್ರೈಮಾಸಿಕ ಕಂತಾಗಿ ಅನುದಾನವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಗಳಾದ ಸಿಬ್ಬಂದಿ ವೆಚ್ಚ ಯೋಜನೆ ಮತ್ತು ಯೋಜನೇತರ ಹಾಗೂ ಹುಡ್ಕೊ ಸಾಲದ ಮೇಲು ಉಸ್ತುವಾರಿ (ಯೋಜನೇತರ)ಗಾಗಿ ಒಟ್ಟು ರು. 638.55 ಲಕ್ಷಗಳು (ಆರು ಕೋಟಿ ಮೂವತ್ತೆಂಟು ಲಕ್ಷಕ ಐವತ್ತೈದು ಸಾವಿರ ರೂಪಾಯಿಗಳು ಮಾತ್ರ) ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಿ ಸರ್ಕಾರ ಆದೇಶಿಸಿದೆ.

ರೂ. ಲಕ್ಷಗಳಲ್ಲಿ

| ಕ್ರಮ ಸಂಖ್ಯೆ | ಲೆಕ್ಕ ಶೀರ್ಷಿಕೆ | ಮೊದಲನೇ ತ್ರೈಮಾಸಿಕ | | |
|---|---|---|---|---|
| | | ಯೋಜನೆ | ಯೋಜನೇತರ | ಒಟ್ಟು |
| 1 | ಸಿಬ್ಬಂದಿ ವೆಚ್ಚ<br>2217–04–191–2–01 | 87.50 | 71.83 | 159.33 |
| 2 | ಕೊಳಚೆಗಳ ಸುಧಾರಣೆ ಸಹಾಯಧನ<br>2217–04–191–2–02 | 12.50 | 0.00 | 12.50 |
| 3 | ಹುಡ್ಕೋ ಸಾಲಗಳ ಮೇಲು ಉಸ್ತವಾರಿ<br>4217–60–800–3–01 | – | 466.72 | 466.72 |
| | **ಒಟ್ಟು** | | | **638.55** |

ಈ ಅನುದಾನವನ್ನು ಈ ಕೆಳಕಂಡ ನಿಬಂಧನೆಗೊಳಪಟ್ಟು ಬಿಡುಗಡೆಗೊಳಿಸಿದೆ.

1. ಸರ್ಕಾರದ ಉಪ ಕಾರ್ಯದರ್ಶಿ, ವಸತಿ ಇಲಾಖೆ, ಬೆಂಗಳೂರು ಇವರು ಹಣ ಬಿಡುಗಡೆ ಮಾಡುವ ಬಿಲ್ಲಿಗೆ ಮೇಲು ರುಜು ಮಾಡಲು ಅಧಿಕೃತವಾಗಿರುತ್ತಾರೆ.
2. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನದ ಬಗ್ಗೆ ಪ್ರತ್ಯೇಕ ಲೆಕ್ಕವನ್ನು ಇಡತಕ್ಕದ್ದು.
3. ಯಾವ ಉದ್ದೇಶಕ್ಕಾಗಿ ಹಣ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಬಳಸತಕ್ಕದ್ದು.
4. ಪ್ರಸಕ್ತ ಸಾಲಿನಲ್ಲಿ ಬಿಡುಗಡೆ ಮಾಡಿದ ಹಣಕಾಸಿನ ಮೊತ್ತಕ್ಕೆ ಬಳಕೆ ಪ್ರಮಾಣ ಪತ್ರವನ್ನು ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ಇವರಿಗೆ ಕಳುಹಿಸಿ ಅದರ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ : ಎಫ್‌ಡಿ 435 ವೆಚ್ಚ–9/2010, ದಿನಾಂಕ : 29–6–2010ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಆರ್. ನಾಗರಾಜ**

ಪೀಠಾಧಿಕಾರಿ–4, ವಸತಿ ಇಲಾಖೆ

ಪಿ.ಆರ್. 1832

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಶ್ರೀ ಟಿ.ಎಸ್. ರಮೇಶ್‌ರವರನ್ನು ಅಧ್ಯಕ್ಷರು, ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರರವರ ಆಪ್ತ ಶಾಖೆಯಲ್ಲಿ ಗ್ರೂಫ್–ಡಿ ಹುದ್ದೆಗೆ ನೇಮಿಸುವ ಬಗ್ಗೆ.

**ಓದಲಾಗಿದೆ :** ಅಧ್ಯಕ್ಷರು, ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಇವರ ಟಿಪ್ಪಣಿ ಸಂಖ್ಯೆ : ಕಗಪ್ರಅಪ್ರಾ/88/2010, ದಿನಾಂಕ : 25–1–2010.

**ಪ್ರಸ್ತಾವನೆ :**

ಮೇಲೆ ಓದಲಾದ ಟಿಪ್ಪಣಿಯಲ್ಲಿ ಮಾನ್ಯ ಅಧ್ಯಕ್ಷರು, ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಇವರು ಶ್ರೀ ಟಿ.ಎಸ್. ರಮೇಶ್ ಬಿನ್ ಕೆ.ಎಸ್. ಸಿದ್ಧಬಸಪ್ಪ, ತುಂಬಿಗೆರೆ, ದಾವಣಗೆರೆ, ದಾವಣಗೆರೆ ತಾಲ್ಲೂಕು, ಇವರನ್ನು ದಿನಾಂಕ : 25–1–2010 ರಿಂದ ಜಾರಿಗೆ ಬರುವಂತೆ ಗುತ್ತಿಗೆ ಆಧಾರದ ಮೇಲೆ ಗ್ರೂಪ್–ಡಿ ಹುದ್ದೆಗೆ ನೇಮಿಸಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರ ಆಪ್ತ ಶಾಖೆಯ ಖಾಲಿ ಇರುವ ಗ್ರೂಪ್–ಡಿ ಹುದ್ದೆಗೆ ಶ್ರೀ ಟಿ.ಎಸ್. ರಮೇಶ್‌ರವರನ್ನು ಗುತ್ತಿಗೆ ಆಧಾರದ ಮೇಲೆ ನೇಮಿಸಲು ತೀರ್ಮಾನಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ : ಕಸಂವಾಪ್ರ 31 ಕೆಜಿಎಲ್ 2010, ಬೆಂಗಳೂರು, ದಿನಾಂಕ : 8–7–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಟಿ.ಎಸ್. ರಮೇಶ್‌ರವರನ್ನು ಅನುಬಂಧದಲ್ಲಿ ಲಗತ್ತಿಸಿರುವ ಷರತ್ತು ಮತ್ತು ನಿಬಂಧನೆಗಳನ್ವಯ ದಿನಾಂಕ : 21–5–2010 ರಿಂದ ಜಾರಿಗೆ ಬರುವಂತೆ ಅಧ್ಯಕ್ಷರು, ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ, ಇವರ ಆಪ್ತ ಶಾಖೆಯಲ್ಲಿನ ಗ್ರೂಪ್–ಡಿ ಹುದ್ದೆಗೆ ಪ್ರಾಧಿಕಾರದ ಅಧ್ಯಕ್ಷರ ಅವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ, ಅದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಗ್ರೂಪ್–ಡಿ ಹುದ್ದೆಗೆ ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲು ಸರ್ಕಾರವು ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 316 ವೆಚ್ಚ–7/2010, ದಿನಾಂಕ 24–6–2010 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಕೆ. ಭರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು
ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ಸರ್ಕಾರಿ ಆದೇಶ ಸಂಖ್ಯೆ : ಕಸಂವಾಪ್ರ 31 ಕೆಜಿಎಲ್ 2010, ದಿನಾಂಕ**

**ಗುತ್ತಿಗೆ ನೇಮಕಾತಿಯ ಬಗ್ಗೆ ಷರತ್ತು ಮತ್ತು ನಿಬಂಧನೆಗಳು**

1. ಶ್ರೀ ಟಿ.ಎಸ್. ರಮೇಶ್, ಗ್ರೂಪ್–ಡಿ, ರವರ ಗುತ್ತಿಗೆ ನೇಮಕಾತಿಯ ಅವಧಿಯು ದಿನಾಂಕ : 21–5–2010 ರಿಂದ ಜಾರಿಗೆ ಬರುವಂತೆ ಕರ್ನಾಟಕ ಗಡಿ ಅಭಿವೃದ್ಧಿ ಪ್ರಾಧಿಕಾರದ ಈಗಿನ ಅಧ್ಯಕ್ಷರ ಪದಾವಧಿಯವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.
2. ಇವರ ಗುತ್ತಿಗೆ ನೇಮಕಾತಿಗೆ ಮಾಸಿಕ ರೂ.4,800/– (ನಾಲ್ಕು ಸಾವಿರದ ಎಂಟು ನೂರು ರೂಪಾಯಿಗಳು ಮಾತ್ರ) ಗಳ ಸಂಚಿತ ವೇತನವನ್ನು ನಿಗದಿಪಡಿಸಲಾಗಿದೆ. ಇದಲ್ಲದೆ, ಇನ್ನಿತರ ಯಾವುದೇ ಭತ್ಯೆಗಳಿಗೂ ಇವರು ಅರ್ಹರಾಗಿರುವುದಿಲ್ಲ.
3. ಸದರಿ ಗುತ್ತಿಗೆ ನೌಕರನು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.
4. ಸದರಿ ಗುತ್ತಿಗೆ ನೌಕರರ ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆಯನ್ನು ಮಾತ್ರ ಪಡೆಯಲು ಅರ್ಹರಾಗಿರುತ್ತಾರೆ.
5. ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೇ ವೈದ್ಯಕೀಯ ಕಾರಣಗಳ ಮೇರೆಗಾಗಲೀ ಅಥವಾ ಬೇರೆ ಕಾರಣಗಳಿಂದಾಗಲೀ ಅನಧಿಕೃತ ಗೈರು ಹಾಜರಿಯಾದಲ್ಲಿ ಗುತ್ತಿಗೆ ಆಧಾರದ ನೇಮಕಾತಿಯು ತಾನಾಗಿಯೇ ರದ್ದಾಗುತ್ತದೆ.
6. ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆದು, ವೈದ್ಯಕೀಯ ಕಾರಣಗಳ ಮೇರೆಗೆ ಅಥವಾ ಸಮರ್ಥನೀಯ ಕಾರಣಗಳ ಮೇರೆಗೆ ಗುತ್ತಿಗೆ ಆಧಾರದ ಅವಧಿಯಲ್ಲಿ ಮೂರು ತಿಂಗಳಿಗೆ ಮೀರದಂತೆ, ಗೈರುಹಾಜರಾದಲ್ಲಿ ಆ ಕಾರಣದಿಂದ ಗುತ್ತಿಗೆ ನೇಮಕಾತಿ ರದ್ದಾಗುವುದಿಲ್ಲ. ಆದರೆ ಈ ಅವಧಿಯನ್ನು ಕರ್ತವ್ಯ ರಹಿತ ದಿನಗಳೆಂದು (ಡೈಸ್–ನಾನ್) ಪರಿಗಣಿಸಲಾಗುವುದು ಮತ್ತು ಅವರು ಈ ಅವಧಿಗೆ ಯಾವುದೇ ವೇತನ ಮತ್ತು ಇತರೆ ಸೌಲಭ್ಯಗಳಿಗೆ ಅರ್ಹರಿರುವುದಿಲ್ಲ.
7. ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಿಗೆ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ, ವೇತನ ಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.
8. ಸದರಿ ನೌಕರರ ದುರ್ವರ್ತನೆ, ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ಧರಾಗಿರತಕ್ಕದ್ದು.
9. ಸದರಿ ಗುತ್ತಿಗೆ ನೇಮಕಾತಿಯನ್ನು ಯಾವುದೇ ಕಾರಣಕ್ಕೂ ಖಾಯಂ ಎಂದು ಪರಿಗಣಿಸುವುದಿಲ್ಲ.
10. ಅವರ ಕರ್ತವ್ಯ ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಗಳಿಂದ ನೆರವೇರಿಸುವುದು.
11. ಅವರ ಕರ್ತವ್ಯವನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.
12. 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.
13. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.

14. ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಮತ್ತು ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಅವರು ಸರ್ಕಾರಕ್ಕೆ ತುಂಬಿಕೊಡಲು ಹೊಣೆಯಾಗಿರುತ್ತಾರೆ.
15. ಆ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು
ಪ್ರವಾಸೋದ್ಯಮ ಇಲಾಖೆ (ಆಡಳಿತ)

ಪಿ.ಆರ್. 1833

## ವಸತಿ ಸಚಿವಾಲಯ

**ವಿಷಯ :** ನೆರೆಹಾವಳಿ ಸಂತ್ರಸ್ಥರಿಗೆ ಪುನರ್ವಸತಿ ಕಲ್ಪಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ವಇ 16 ಹೆಚ್‌ಎಹೆಚ್ 2010, ದಿನಾಂಕ : 12–3–2010, ಹಾಗೂ ತಿದ್ದುಪಡಿ ದಿನಾಂಕ : 23–3–2010.

**2.** ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ : ಮುಮಕಾ/3795/2010 ಹಾಗೂ ಮುಮಕಾ/3796/2010, ದಿನಾಂಕ 30–6–2010.

**ಪ್ರಸ್ತಾವನೆ :**

ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿ ನೆರೆಹಾವಳಿ ಸಂತ್ರಸ್ಥರಿಗೆ ಪುನರ್ವಸತಿ ಕಲ್ಪಿಸುವುದಕ್ಕಾಗಿ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ಹಾಗೂ ಕರ್ನಾಟಕ ಗೃಹ ಮಂಡಳಿ ಮುಖಾಂತರ ಮನೆಗಳ ನಿರ್ಮಾಣವನ್ನು ಕೈಗೊಳ್ಳಲಾಗಿದ್ದು, ಇನ್ನೂ ಹೆಚ್ಚುವರಿ ಮನೆಗಳನ್ನು ನಿರ್ಮಿಸಲು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 16 ಹೆಚ್‌ಎಹೆಚ್ 2010, ಬೆಂಗಳೂರು, ದಿನಾಂಕ : 8ನೇ ಜುಲೈ 2010**

ನೆರೆಹಾವಳಿ ಸಂತ್ರಸ್ಥರಿಗೆ ಮನೆಗಳ ನಿರ್ಮಾಣ ಕಾರ್ಯವನ್ನು ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ಹಾಗೂ ಕರ್ನಾಟಕ ಗೃಹ ಮಂಡಳಿಗೆ ವಹಿಸಿಕೊಡಲಾಗಿದ್ದು, ಈ ಕೆಳಗಿನಂತೆ 2,542 ಹೆಚ್ಚುವರಿ ಮನೆಗಳನ್ನು ವಹಿಸಿಕೊಡಲಾಗಿದ್ದು, ಅದೇ ಷರತ್ತು ಮತ್ತು ನಿಬಂಧನೆಗಳ ಮೇರೆಗೆ ಮನೆಗಳ ನಿರ್ಮಾಣ ಕಾರ್ಯವನ್ನು ಕೂಡಲೇ ಪ್ರಾರಂಭಿಸಲು ಆದೇಶಿಸಲಾಗಿದೆ.

1) ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ವಹಿಸಿಕೊಡಲಾದ ಮನೆಗಳು :

| ಜಿಲ್ಲೆ | ತಾಲ್ಲೂಕು | ಗ್ರಾಮಗಳು | ಮನೆಗಳ ಸಂಖ್ಯೆ |
|---|---|---|---|
| ಬಾಗಲಕೋಟೆ | ಬಾದಾಮಿ | ಚಿಮ್ಮಲಗಿ | 428 |
| | | ಢಾಣಕಶಿರೂರ | 324 |
| | | ಕಿತ್ತಲಿ | 230 |
| | | ತಳಕವಾಡ | 134 |
| | | ಆಲೂರು ಎಸ್.ಕೆ | 177 |
| | ಜಮಖಂಡಿ | ಜಮಖಂಡಿ | 102 |
| | ಹುನಗುಂದ | ಹಿರೆಮಳಗಾವಿ | 490 |
| | | ಒಟ್ಟು | 1885 |

2) ಕರ್ನಾಟಕ ಗೃಹ ಮಂಡಳಿಗೆ ವಹಿಸಿಕೊಡಲಾದ ಮನೆಗಳು :

| ಜಿಲ್ಲೆ | ತಾಲ್ಲೂಕು | ಗ್ರಾಮಗಳು | ಮನೆಗಳ ಸಂಖ್ಯೆ |
|---|---|---|---|
| ಬಾಗಲಕೋಟೆ | ಬಾದಾಮಿ | ಕಾಟಾಪುರ | 132 |
| | | ಜಕನೂರ | 113 |
| | | ಕಾತರಕಿ | 153 |
| | | ಗೋವಿನಕೊಪ್ಪ | 113 |
| | | ತಮಿನಾಳ | 146 |
| | | ಒಟ್ಟು | 657 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಆರ್. ವಲ್ಲೂರ**
ಪೀಠಾಧಿಕಾರಿ–2, ವಸತಿ ಇಲಾಖೆ

ಪಿ.ಆರ್. 1834

## ವಸತಿ ಸಚಿವಾಲಯ

**ವಿಷಯ :** ನೆರೆಹಾವಳಿ ಸಂತ್ರಸ್ಥರಿಗೆ ಪುನರ್ವಸತಿ ಕಲ್ಪಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ವಇ 16 ಹೆಚ್ಎಹೆಚ್ 2010, ದಿನಾಂಕ : 26-5-2010

2. ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ : ಮುಮಕಾ/3576/2010 ದಿನಾಂಕ 21-6-2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ವಹಿಸಿಕೊಟ್ಟ ಧಾರವಾಡ ಜಿಲ್ಲೆಯ ಅಹೆಟ್ಟಿ ಗ್ರಾಮದಲ್ಲಿ 55 ಮನೆಗಳು ಹಾಗೂ ಬಿಜಾಪುರ ಜಿಲ್ಲೆಯ ತೆಗ್ಗಳಿ ಗ್ರಾಮದಲ್ಲಿ 186 ಮನೆಗಳ ಬದಲಾಗಿ ಧಾರವಾಡ ಜಿಲ್ಲೆಯ ನವಲಗುಂದ ತಾಲ್ಲೂಕಿನ ಅಹೆಟ್ಟಿ ಗ್ರಾಮದಲ್ಲಿ ಒಟ್ಟು 269 ಮನೆಗಳನ್ನು ನಿರ್ಮಿಸುವಂತೆ ಆದೇಶಿಸಲಾಗಿತ್ತು. ಈಗ ಧಾರವಾಡ ಜಿಲ್ಲಾಧಿಕಾರಿಗಳು ಅಹೆಟ್ಟಿ ಗ್ರಾಮದಲ್ಲಿ 55 ಮನೆಗಳನ್ನು ನಿರ್ಮಿಸಲು ಕೋರಿರುವ ಮೇರೆಗೆ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 16 ಹೆಚ್ಎಹೆಚ್ 2010 (ಭಾ), ಬೆಂಗಳೂರು, ದಿನಾಂಕ : 8ನೇ ಜುಲೈ 2010**

ನೆರೆಹಾವಳಿ ಸಂತ್ರಸ್ಥರಿಗೆ ಪುನರ್ವಸತಿ ಕಲ್ಪಿಸುವುದಕ್ಕಾಗಿ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮವು ಧಾರವಾಡ ಜಿಲ್ಲೆಯ ಅಹೆಟ್ಟಿ ಗ್ರಾಮದಲ್ಲಿ ಕೈ ಬಿಡಲಾದ 55 ಮನೆಗಳ ನಿರ್ಮಾಣವನ್ನು ಕೈಗೆತ್ತಿಕೊಳ್ಳುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ-2, ವಸತಿ ಇಲಾಖೆ

ಪಿ.ಆರ್. 1835

## LAW, JUSTICE AND HUMAN RIGHTS SECRETARIAT

Sub:- Revision of Pension, Family Pension and Allowances to the retired Judicial Officers of the State Implementation of the recommendations of One Man Commission headed by Hon'ble Mr. Justice E. Padmanabhan (Retd) –Order reg.

Read:- 1) G.O. No.Law 124 LAC 1997 dated 07-05-2003.

2) Report submitted on 17-7-2009 by One Man Commission headed by Hon'ble Mr. Justice E. Padmanabhan (Retd) to the Hon'ble Supreme Court on determination of Salary, Allowances and Pension.

3) The directions issued by the Hon'ble Supreme Court on 26-7-2010 and 02-08-2010 in W.P. © No.1022/1989 (All India Judges Association Vs. Union of India and Others)

4) G.O. No.LAW 147 LAC 2009 dated 24-6-2010.

**PREAMBLE:**

The Hon'ble Supreme Court of India accepted the report of Justice E. Padmanabhan Commission concerned and directed the States to implement the said Commission Report on the Revised Pensionary Benefits and allowances and to pay the arrears from 1-1-2006. The Hon'ble Supreme Court pre-emptorily gave 1-3-2011 as the cut-off date by which payment shall have to be made, including arrears.

Pensioners are of three categories viz.,

i) Officers who have retired earlier to 1-1-2006 (Past Pensioners)

ii) Officers who have retired on or after 1-1-2006

iii) Family Pensioners

The matter has been examined by the Government and hence the following Orders:-

**ORDER NO.LAW 147 LAC 2009, BANGALORE, DATED 30th SEPTEMBER 2010**

The Government in pursuance of the orders of the Hon'ble Supreme Court, hereby accord sanction to implement the recommendations of Justice E. Padmanabhan Commission, so far as Pensionary Benefits and allowances stated herein below are concerned, in respect of Retired Judicial Officers and family pensioners of the State:-

**PART-I**

**PAST PENSIONERS**

(Officers who have retired earlier to 1-1-2006)

The following benefits are admissible effective from 1-1-2006:-

**PENSION**

(a) Revised Pension of the Retd. Judicial Officers shall be 50% of the minimum pay of the post held at the time of retirement in the revised pay scale as shown in the Table mentioned in Part-VI.

(b) There shall not be any ceiling limit on the maximum pension payable.

**PART-II**

Officers who have retired after 1-1-2006

**Qualifying years of service:-**

(a) Qualifying years of service has been slashed down from 33 years to 20 years to get full pension w.e.f. 2-9-2008.

(b) The qualifying service for pension in respect of officers who have retired between 1-1-2006 and 1-9-2008 will be calculated as per the existing rules.

**D. C.R.G.:-**

The ceiling limit of DCRG is enhanced from Rs.3.5 lakhs to Rs.10 lakhs w.e.f. 01.01.2006 as recommended by Padmanabhan Commission.

**PART-III**

FAMILY PENSIONERS

(A) The revision of family pension shall come into effect from 1-1-2006 and will be applicable to the Family Pensioners who are drawing Pension prior to 1-1-2006.

(i) Family Pension shall be revised and refixed at 30 percent of the minimum pay of the pay scale of the post held by the Judicial Officer at the time of his retirement or death in the revised pay scale.

(ii) Domestic Help Allowance of Rs.1,000/- p.m.

(iii) Medical Allowance at Rs.750/- p.m.

(B) The revision of family pension in respect of officers who have retired or died on or after 1-1-2006 shall be as follows:-

i) Family Pension shall be revised and refixed at 30 percent of the last pay drawn.

ii) Domestic Help Allowance of Rs.1,000/- p.m.

iii) Medical Allowance at Rs.750/- p.m.

**PART-IV**

The past pensioners and family pensioners who have completed 80 years of age and above are entitled to additional quantum of pension on par with Central Government employees and it shall be as follows:-

| Age of Family Pensioner/<br>Past Pensioners | Additional quantum of pension |
|---|---|
| From 80 years to less than 85 years | 20% of revised Basic/ family pension |
| From 85 years to less than 90 years | 30% of revised Basic/family pension |
| From 90 years to less than 95 years | 40% of revised Basic/family pension |
| From 95 years to less than 100 years | 50% of revised Basic/family pension |
| 100 years or more | 100% of revised Basic/family pension |

**PART -V**

All Pensioners with effect from 1-1-2006 shall get the following benefits:-

**(i) Monthly Medical Allowance**

They are entitled to get Rs.1,500/- p.m. along with monthly pension.

**(ii) Domestic Help Allowance**

They are entitled to get Rs.2,500/- p.m. through the Principal District Judge within whose jurisdiction they have settled, on production of a certificate of having engaged Domestic Servant.

**PART-VI**

**Dearness Allowance:-**

(i) All Pensioners/Family Pensioners are entitled to Dearness Allowance at the rates applicable to the serving Judicial Officers.

(ii) The revised pay scale is as per G.O. No.LAW 147 LAC 2009 dated 24-6-2010 as shown in the Table below.

(iii) The arrears of all the above benefits shall be payable before 31st March 2011 as directed by Hon'ble Supreme Court.

(iv) In the event of death of pensioner or family pensioner, the arrears of revised pension/family pension together with dearness allowance shall be paid to legal heirs.

(v) The increase in pension/family pension under these orders shall be paid to the pensioners/family pension holders by the Treasury Officer without any authorisation from the Accountant General.

TABLE

| Sl.No. | Designation | Existing Scale of Pay | Revised Scale of Pay |
|---|---|---|---|
| 1 | Civil Judge (Jr.Dn.) (Entry Level) | Rs.9000-250-10750-300-13150-350-14550 | Rs.27700-770-33090-920-40450-1080-44770 |
| 2. | Civil Judge (Jr.Dn) I Stage A.C.P. Scale | Rs.10750-300-13150-350-14900 | Rs.33090-920-40450-1080-45850 |
| 3. | Civil Judge (Jr.Dn.) II Stage A.C.P. Scale | Rs.12850-300-13150-350-15950-400-17550 | Rs.39530-920-40450-1080-49090-1230-54010 |
| 4. | Civil Judge (Sr.Dn.) (Entry Level) | Rs.12850-300-13150-350-15950-400-17550 | Rs.39530-920-40450-1080-49090-1230-54010 |
| 5. | Civil Judge (Sr.Dn.) I Stage A.C.P. Scale | Rs.14200-350-15950-400-18350 | Rs.43690-1080-49090-1230-56470 |
| 6. | Civil Judge (Sr.Dn.) II Stage A.C.P. Scale | Rs.16750-400-19150-450-20500 | Rs.51550-1230-58930-1380-63070 |
| 7. | District Judge (Entry Level) | Rs.16750-400-19150-450-20500 | Rs.51550-1230-58930-1380-63070 |
| 8. | District Judge (Selection Grade) | Rs.18750-400-19150-450-21850-500-22850 | Rs.57700-1230-58930-1380-67210-1540-70290 |
| 9. | District Judge (Super Time Scale) | Rs.22850-500-24850 | Rs.70290-1540-76450 |

This order is issued with the concurrence of the Finance Department vide their endorsement No.FD 15 SRP 2009 dated 21-5-2010 and 28-8-2010.

By Order and in the name of the Governor of Karnataka,
(S. SIDDALINGESH)
Secretary to Government,
Department of Law, Justice and Human Rights

PR 2512

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯದಲ್ಲಿ ಮಾನ್ಯತೆ ಪಡೆದ ಪದವಿ ಪೂರ್ವ ಕಾಲೇಜುಗಳಲ್ಲಿ ಯುವ ಸಂಸತ್ ಸ್ಪರ್ಧೆಯನ್ನು ವ್ಯವಸ್ಥೆಗೊಳಿಸುವುದಕ್ಕಾಗಿ ಹಣಕಾಸು ನೆರವು ಯೋಜನೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ : ಸಂವ್ಯಶಾಇ 15 ಸಂವ್ಯವಿ 2009, ದಿನಾಂಕ 14–7–2009.

**ಪ್ರಸ್ತಾವನೆ :**

ಕರ್ನಾಟಕ ರಾಜ್ಯದಲ್ಲಿ ಪ್ರೌಢ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ನಡೆಸುವ ಯುವ ಸಂಸತ್ ಮಾದರಿಯಲ್ಲಿ 2010–11 ನೇ ಶೈಕ್ಷಣಿಕ ವರ್ಷದಿಂದ ಪದವಿ ಪೂರ್ವ ಕಾಲೇಜುಗಳಲ್ಲಿ ಯುವ ಸಂಸತ್ ಸ್ಪರ್ಧೆಯನ್ನು ನಡೆಸಲು ಸರ್ಕಾರವು ತೀರ್ಮಾನಿಸಿದ್ದುದರಿಂದ ಸದರಿ ಸ್ಪರ್ಧೆಗೆ ಹಣಕಾಸು ಯೋಜನೆಯ ಪ್ರತಿಯನ್ನು ಈ ಆದೇಶಕ್ಕೆ ಲಗತ್ತಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ : ಸಂವ್ಯಶಾಇ 12 ಸಂವ್ಯವಿ 2010, ಬೆಂಗಳೂರು, ದಿನಾಂಕ : 13–07–2010**

ಕರ್ನಾಟಕ ರಾಜ್ಯದ ಪದವಿ ಪೂರ್ವ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಯುವ ಸಂಸತ್ ಸ್ಪರ್ಧೆಗಳನ್ನು ಪ್ರತಿ ವರ್ಷ ನಡೆಸುವುದಕ್ಕಾಗಿ ಹಣಕಾಸಿನ ನೆರವು ಯೋಜನೆ 2010 ನ್ನು (ಅನುಬಂಧ–1ರಲ್ಲಿ ಲಗತ್ತಿಸಿ) ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ರಾಜ್ಯದಲ್ಲಿ ಜಾರಿಗೊಳಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಜಿ. ಶ್ಯಾಮಲ,**
ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

**ಅನುಬಂಧ–1**

**ಕರ್ನಾಟಕ ರಾಜ್ಯದಲ್ಲಿ ಮಾನ್ಯತೆ ಪಡೆದ ಪದವಿ ಪೂರ್ವ ಕಾಲೇಜುಗಳಲ್ಲಿ ಯುವ ಸಂಸತ್ ಸ್ಪರ್ಧೆಯನ್ನು ವ್ಯವಸ್ಥೆಗೊಳಿಸುವುದಕ್ಕಾಗಿ ಹಣಕಾಸು ನೆರವು ಯೋಜನೆ**

**ಪೀಠಿಕೆ**

ಶೈಕ್ಷಣಿಕ ಸಂಸ್ಥೆಗಳಲ್ಲಿ ಯುವ ಸಂಸತ್ ಸ್ಪರ್ಧೆಗಳನ್ನು ಏರ್ಪಡಿಸಿ ನಡೆಸುವ ಪರಿಕಲ್ಪನೆ 1962 ರಲ್ಲಿ ಮುಂಬಯಿಯಲ್ಲಿ ನಡೆದ ನಾಲ್ಕನೇ ಅಖಿಲ ಭಾರತ ಸಚೇತಕರ ಸಮ್ಮೇಳನದಲ್ಲಿ ರೂಪ ತಳೆಯಿತು. ಸದರಿ ಸಮ್ಮೇಳನದಲ್ಲಿ ಇತರೆ ವಿಷಯಗಳ ಜೊತೆಗೆ ಈ ಮುಂದಿನ ಶಿಫಾರಸ್ಸುಗಳನ್ನು ಮಾಡಲಾಯಿತು.

"ಈ ಸಮಿತಿಯು, ಅಣಕು ಸಂಸತ್ ಕಾರ್ಯಕ್ರಮಗಳನ್ನು ಶೈಕ್ಷಣಿಕ ಸಂಸ್ಥೆಗಳಲ್ಲಿ ಮತ್ತು ಪಂಚಾಯಿತಿಗಳ ಮೂಲಕ ಗ್ರಾಮೀಣ ಪ್ರದೇಶಗಳಲ್ಲಿ ನಡೆಸಲು ಸರ್ಕಾರವು ಪ್ರೋತ್ಸಾಹಿಸತಕ್ಕದ್ದೆಂದು ಶಿಫಾರಸ್ಸು ಮಾಡುತ್ತದೆ."

ಮೇಲ್ಕಂಡ ಶಿಫಾರಸ್ಸುಗಳನ್ನು 1966 ರಲ್ಲಿ ಬೆಂಗಳೂರಿನಲ್ಲಿ ನಡೆದ ಐದನೇ ಅಖಿಲ ಭಾರತ ಸಚೇತಕರ ಸಮ್ಮೇಳನವು ಈ ಮುಂದೆ ಹೇಳಿರುವಂತೆ ಪುನರುಚ್ಚರಿಸಿತು:–

"ಮುಂಬಯಿಯಲ್ಲಿ ನಡೆದ ನಾಲ್ಕನೇ ಅಖಿಲ ಭಾರತ ಸಚೇತಕರ ಸಮ್ಮೇಳನವು, ಜನಪ್ರತಿನಿಧಿ ಸಂಸ್ಥೆಗಳ ಪಾತ್ರದ ಬಗ್ಗೆ ಅರಿವು ಮೂಡಿಸಲು ಗ್ರಾಮ ಪಂಚಾಯತಿಗಳಲ್ಲಿ ಅಣಕು ಸಂಸತ್ ಕಾರ್ಯಕ್ರಮಗಳನ್ನು ನಡೆಸಬೇಕೆಂದು ಶಿಫಾರಸು ಮಾಡಿತ್ತು. ಈ ಶಿಫಾರಸುಗಳನ್ನು ಕೆಲವು ರಾಜ್ಯಗಳಲ್ಲಿ ಜಾರಿಗೆ ತಂದಿರುವುದಿಲ್ಲ ಎಂಬುದನ್ನು ಈ ಸಮ್ಮೇಳನವು ಗಮನಿಸಿದೆ. ಸಮ್ಮೇಳನವು, ಸಂಬಂಧಪಟ್ಟ ರಾಜ್ಯ ಸರ್ಕಾರಗಳು ತಮ್ಮ ತೀರ್ಮಾನಗಳನ್ನು ಮರುಪರಿಶೀಲಿಸುವಂತೆ ಅವುಗಳ ಮನವೊಲಿಸಬೇಕೆಂದು ಪುನರುಚ್ಚರಿಸುತ್ತದೆ."

ಮೇಲ್ಕಂಡ ಶಿಫಾರಸುಗಳಿಗನುಸಾರ, ಸಂಸದೀಯ ವ್ಯವಹಾರಗಳ ಮಂತ್ರಾಲಯವು ಅಣಕು ಸಂಸತ್ (ಈಗ "ಯುವ ಸಂಸತ್") ಸ್ಪರ್ಧೆಯ ಯೋಜನೆಯ ವಿವರಗಳನ್ನು ತಯಾರಿಸಿತು ಮತ್ತು ಅದನ್ನು ಪ್ರಾಯೋಗಿಕ ರೂಪದಲ್ಲಿ ನಡೆಸುವ ಉದ್ದೇಶದಿಂದ ದೆಹಲಿಯ ಪ್ರೌಢ ಶಾಲೆಗಳಲ್ಲಿ ಸ್ಪರ್ಧೆಗಳನ್ನು ಪ್ರಾರಂಭಿಸಲು ತೀರ್ಮಾನಿಸಿತು. 1967 ರಲ್ಲಿ ಸಿಮ್ಲಾದಲ್ಲಿ ಮತ್ತು 1969 ರಲ್ಲಿ ಮದ್ರಾಸಿನಲ್ಲಿ ಅನುಕ್ರಮವಾಗಿ ನಡೆದ ಆರು ಮತ್ತು ಏಳನೇ ಅಖಿಲ ಭಾರತ ಸಚೇತಕರ ಸಮ್ಮೇಳನದಲ್ಲಿ ಈ ಮುಂದಿನ ಶಿಫಾರಸ್ಸುಗಳನ್ನು ಮಾಡಲಾಯಿತು:–

"ದೆಹಲಿಯ ಶಾಲೆಗಳಲ್ಲಿ "ಯುವ ಸಂಸತ್" ಕಾರ್ಯಕ್ರವನ್ನು ಉತ್ತೇಜಿಸುವುದಕ್ಕಾಗಿ ಸಂಸದೀಯ ವ್ಯವಹಾರಗಳ ಮಂತ್ರಾಲಯವು ಮಾಡಿರುವ ಉತ್ತಮ ಕಾರ್ಯವನ್ನು ಪ್ರಶಂಸಿಸುತ್ತಾ, ಉಳಿದ ರಾಜ್ಯಗಳು ಸಹ ತಮ್ಮ ತಮ್ಮ ರಾಜ್ಯಗಳಲ್ಲಿ ಈ ಯೋಜನೆಯನ್ನು ಅಳವಡಿಸಲು ವ್ಯವಸ್ಥೆಯನ್ನು ಮಾಡತಕ್ಕದ್ದೆಂದು ಸಮ್ಮೇಳನವು ಆಗ್ರಹಪೂರ್ವಕವಾಗಿ ಶಿಫಾರಸು ಮಾಡುತ್ತದೆ. [6ನೇ ಅಖಿಲ ಭಾರತ ಸಚೇತಕರ ಸಮ್ಮೇಳನ]"

"ದೆಹಲಿಯ ಶಾಲೆಗಳಲ್ಲಿ 'ಅಣಕು ಸಂಸತ್' ಯೋಜನೆಯ ಯಶಸ್ವಿ ಅನುಷ್ಠಾನವನ್ನು ಹಾಗೂ ಪ್ರಮುಖ ಸಂಸದರು, ಪತ್ರಿಕಾ ಮಾಧ್ಯಮಗಳು ಮತ್ತು ಶಿಕ್ಷಣ ತಜ್ಞರಿಂದ ಆ ಬಗ್ಗೆ ಬಂದ ವ್ಯಾಪಕ ಮೆಚ್ಚುಗೆಯನ್ನು ಗಮನದಲ್ಲಿಟ್ಟುಕೊಂಡು ಮತ್ತು ರಾಷ್ಟ್ರದಲ್ಲಿ ಸುಭದ್ರ ಸಂಸದೀಯ ಪದ್ಧತಿಯನ್ನು ಅನುಷ್ಠಾನಗೊಳಿಸುವ ದೃಷ್ಟಿಯಿಂದ ಸಮ್ಮೇಳನವು ಈ ಮುಂದಿನ ಶಿಫಾರಸ್ಸುಗಳನ್ನು ಮಾಡುತ್ತದೆ.–

(ಎ) ಸಂಸದೀಯ ವ್ಯವಹಾರಗಳ ಕೇಂದ್ರ ಮಂತ್ರಾಲಯವು ಅನುಸರಿಸಿದ ಮಾದರಿಯನ್ನೇ ಅನುಸರಿಸಿ ಎಲ್ಲಾ ರಾಜ್ಯಗಳು/ಕೇಂದ್ರಾಡಳಿತ ಪ್ರದೇಶಗಳು ತಮ್ಮ ತಮ್ಮ ರಾಜ್ಯ/ಕೇಂದ್ರಾಡಳಿತ ಪ್ರದೇಶಗಳಲ್ಲಿ ಈ ಯೋಜನೆಯನ್ನು ಜಾರಿಗೊಳಿಸಲು ಕ್ರಮಕೈಗೊಳ್ಳತಕ್ಕದ್ದು.

(ಬಿ) ಸಂಸದೀಯ ವ್ಯವಹಾರಗಳ ಕೇಂದ್ರ ಮಂತ್ರಾಲಯವು, ಅಗತ್ಯವಿದ್ದಲ್ಲಿ ಹಣಕಾಸು ನೆರವನ್ನು ನೀಡುವ ಮೂಲಕ ಯೋಜನೆಯನ್ನು ಜಾರಿಗೆ ತರಲು ರಾಜ್ಯಗಳು/ಕೇಂದ್ರಾಡಳಿತ ಪ್ರದೇಶಗಳಿಗೆ ಎಲ್ಲಾ ಬಗೆಯ ಪ್ರೋತ್ಸಾಹಗಳನ್ನು ನೀಡತಕ್ಕದ್ದು; ಮತ್ತು

(ಸಿ) ಸಂಸದೀಯ ವ್ಯವಹಾರಗಳ ಕೇಂದ್ರ ಮಂತ್ರಾಲಯವು, ಯೋಜನೆಯನ್ನು ಈಗಾಗಲೇ ಜಾರಿಗೊಳಿಸಿರುವ ರಾಜ್ಯಗಳು/ಕೇಂದ್ರಾಡಳಿತ ಪ್ರದೇಶಗಳ ನಡುವೆ ಅಂತರ್ ರಾಜ್ಯ ಸ್ಪರ್ಧೆಗಳನ್ನು ಸಹ ವ್ಯವಸ್ಥೆಗೊಳಿಸತಕ್ಕದ್ದು. (7ನೇ ಅಖಿಲ ಭಾರತ ಸಚೇತಕರ ಸಮ್ಮೇಳನ]".

7ನೇ ಅಖಿಲ ಭಾರತ ಸಚೇತಕರ ಸಮ್ಮೇಳನವು ಮಾಡಿದ ಮೇಲ್ಕಂಡ ಶಿಫಾರಸುಗಳ (ಬಿ) ಭಾಗದ ಪಾಲನೆಯಲ್ಲಿ, ಭಾರತ ಸರ್ಕಾರದ ಸಂಸದೀಯ ವ್ಯವಹಾರಗಳ ಮಂತ್ರಾಲಯವು, ರಾಜ್ಯಗಳು/ಕೇಂದ್ರಾಡಳಿತ ಪ್ರದೇಶಗಳಲ್ಲಿನ ಮಾನ್ಯತೆ ಪಡೆದ ಪ್ರೌಢಶಾಲೆಗಳಲ್ಲಿ ಯುವ ಸಂಸತ್ ಸ್ಪರ್ಧೆಯನ್ನು ವ್ಯವಸ್ಥೆಗೊಳಿಸುವುದಕ್ಕಾಗಿ – ರಾಜ್ಯ ಸರ್ಕಾರಗಳು/ಕೇಂದ್ರಾಡಳಿತ ಪ್ರದೇಶಗಳಿಗೆ ಹಣಕಾಸು ನೆರವು ನೀಡುವುದಕ್ಕಾಗಿ ಈ ಯೋಜನೆಯನ್ನು ರೂಪಿಸಿದೆ.

ಕರ್ನಾಟಕ ರಾಜ್ಯದಲ್ಲಿ ಕೇಂದ್ರ ಸರ್ಕಾರದ ಯೋಜನೆಯ ಅನ್ವಯ ಮಾನ್ಯತೆ ಪಡೆದ ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ಯುವ ಸಂಸತ್ ಸ್ಪರ್ಧೆಗಳನ್ನು ನಡೆಸಲಾಗುತ್ತಿದೆ. 2010–11ನೇ ಸಾಲಿನಿಂದ ಈ ಕೆಳಗೆ ನಮೂದಿಸಿರುವ ಮಾರ್ಗಸೂಚಿಗಳನ್ವಯ ಪದವಿ ಪೂರ್ವ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಯುವ ಸಂಸತ್ ಸ್ಪರ್ಧೆಗಳನ್ನು ನಡೆಸಲಾಗುವುದು.

1. **ಯೋಜನೆಯ ಉದ್ದೇಶ:–** ಪ್ರಜಾಪ್ರಭುತ್ವದ ಬುನಾದಿಯನ್ನು ಭದ್ರಪಡಿಸುವ, ಶಿಸ್ತು, ಇತರರ ಅಭಿಪ್ರಾಯಗಳ ಬಗ್ಗೆ ಗೌರವ, ತಾಳ್ಮೆ ಮುಂತಾದ ಆರೋಗ್ಯಕರ ಗುಣ ವಿಶೇಷಗಳನ್ನು ಮೈಗೂಡಿಸುವ ಮತ್ತು ವಿದ್ಯಾರ್ಥಿ ಸಮುದಾಯದಲ್ಲಿ ಸಂಸತ್ ಕಾರ್ಯ ಕಲಾಪದ ಬಗ್ಗೆ ಅರಿವು ಮೂಡಿಸುವುದೇ ಇದರ ಉದ್ದೇಶ.

2. **ಯೋಜನೆಯ ಕಾರ್ಯಾಚರಣೆ :–** ಈ ಯೋಜನೆಯನ್ನು ಪದವಿ ಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶಕರ ಸಹಯೋಗದೊಂದಿಗೆ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಮಾರ್ಗದರ್ಶನದಲ್ಲಿ ಕಾರ್ಯಗತಗೊಳಿಸಲಾಗುವುದು.

3. **ಸ್ಪರ್ಧೆಯಲ್ಲಿ ಭಾಗವಹಿಸುವುದಕ್ಕೆ ಅರ್ಹತೆ :–** ಕರ್ನಾಟಕ ರಾಜ್ಯದ ಮಾನ್ಯತೆ ಪಡೆದ ಎಲ್ಲಾ ಪದವಿ ಪೂರ್ವ ಕಾಲೇಜುಗಳು ಸ್ಪರ್ಧೆಯಲ್ಲಿ ಭಾಗವಹಿಸಲು ಅರ್ಹತೆ ಹೊಂದಿವೆಯೆಂದು ಪರಿಗಣಿಸಬಹುದು. ಭಾಗವಹಿಸುವ ಶಾಲೆಗಳ ಪಟ್ಟಿಯನ್ನು, ಪ್ರತಿವರ್ಷದ ಮಾರ್ಚ್ 31ರೊಳಗೆ ಪದವಿ ಪೂರ್ವ ಶಿಕ್ಷಣ ನಿರ್ದೇಶನಾಲಯವು ಅಂತಿಮಗೊಳಿಸುತ್ತವೆ.

4. **ಯುವ ಸಂಸತ್ ಸ್ಪರ್ಧೆಯನ್ನು ನಡೆಸುವ ಅವಧಿ :–** "ಯುವ ಸಂಸತ್ ಸ್ಪರ್ಧೆ" ಯನ್ನು, ಪ್ರತಿವರ್ಷವು ನಡೆಸಲಾಗುವುದು. ಈ ಬಗ್ಗೆ ಸವಿವರ ಕಾರ್ಯಕ್ರಮವನ್ನು ಸಂಸದೀಯ ವ್ಯವಹಾರಗಳ ಇಲಾಖೆ ಹಾಗೂ ಪದವಿ ಪೂರ್ವ ಶಿಕ್ಷಣ ಇಲಾಖೆ ರೂಪಿಸತಕ್ಕದ್ದು ಮತ್ತು ವಾರ್ಷಿಕ ಸ್ಪರ್ಧೆಯಲ್ಲಿ ಭಾಗವಹಿಸಲಿರುವ ಸಂಸ್ಥೆಗಳಿಗೆ ಸುತ್ತೋಲೆ ಮೂಲಕ ತಿಳಿಸತಕ್ಕದ್ದು.

5. **ಯುವ ಸಂಸತ್ತಿನಲ್ಲಿ ಭಾಗವಹಿಸುವವರ ಸಂಖ್ಯೆ :–** ಪ್ರತಿಯೊಂದು ಪದವಿ ಪೂರ್ವ ಕಾಲೇಜಿನಲ್ಲಿ "ಯುವ ಸಂಸತ್ ಸ್ಪರ್ಧೆಯನ್ನು" ನಡೆಸುವುದಕ್ಕಾಗಿ ಬೇಕಾಗುವ ವಿದ್ಯಾರ್ಥಿಗಳ ಸಂಖ್ಯೆಗೆ ಯಾವುದೇ ಮಿತಿ ಇಲ್ಲ. ಆದಾಗ್ಯೂ, ಅಧಿವೇಶನದ ಅವಧಿಯನ್ನು ಸೀಮಿತಗೊಳಿಸುವುದು ಅಪೇಕ್ಷಣೀಯವಾಗಿರುವ ಕಾರಣ, ಭಾಗವಹಿಸಿರುವ ವಿದ್ಯಾರ್ಥಿಗಳಲ್ಲಿ ಹಲವರು ಸಂಸತ್ತಿನ ಅಧಿವೇಶನದ ಒಂದು ಚಿತ್ರಣವನ್ನು ಮೂಡಿಸುವುದಕ್ಕೆ ಮಾತ್ರವೇ ಸುಮ್ಮನೆ ಕುಳಿತುಕೊಂಡಿರಬೇಕಾಗುತ್ತದೆ ಮಾತ್ರವಲ್ಲದೆ ಅವರಿಗೆ ಮಾತನಾಡುವ ಅಗತ್ಯವಿರುವುದಿಲ್ಲ.

6. **ಯುವ ಸಂಸತ್ತಿನ ಅಧಿವೇಶನದ ಅವಧಿ :–** ಯುವ ಸಂಸತ್ತಿನ ಅಧಿವೇಶನದ ಅವಧಿಯು ಒಂದು ಗಂಟೆ ಅವಧಿಯನ್ನು ಮೀರತಕ್ಕದಲ್ಲ ಮತ್ತು ಇದರಲ್ಲಿ ಸುಮಾರು 20 ನಿಮಿಷಗಳ ಅವಧಿಯನ್ನು ಪ್ರಶ್ನೆಗಳಿಗೆ ಕಾಯ್ದಿರಿಸತಕ್ಕದ್ದು.

7. **ಯುವ ಸಂಸತ್ತಿನ ಅಧಿವೇಶನದಲ್ಲಿಯ ಚರ್ಚೆಯ ವಿಷಯ :–** ಪ್ರಶ್ನೋತ್ತರಗಳಿಗೆ ಅಥವಾ ಇತರ ಚರ್ಚೆಗೆ ಯಾವುದೇ ನಿರ್ದಿಷ್ಟ ವಿಷಯಗಳನ್ನು ಗೊತ್ತುಪಡಿಸಿರುವುದಿಲ್ಲ. ಆದಾಗ್ಯೂ, ಯುವ ಸಂಸತ್ತಿನಲ್ಲಿ ಕೇಳಲಾಗುವ ಪ್ರಶ್ನೆಗಳು, ಇತ್ತೀಚಿನ ಕ್ಷೇಮಾಭ್ಯುದಯ ಕಾರ್ಯಚಟುವಟಿಕೆಗಳು, ರಾಷ್ಟ್ರದ ರಕ್ಷಣೆ, ಸಾಮಾಜಿಕ ನ್ಯಾಯ, ಸಮಾಜ ಸುಧಾರಣೆಗಳು, ಆರ್ಥಿಕ ಅಭಿವೃದ್ಧಿ, ಶಿಕ್ಷಣ, ಮತೀಯ ಸಾಮರಸ್ಯ, ಆರೋಗ್ಯ, ವಿದ್ಯಾರ್ಥಿಗಳಲ್ಲಿ ಶಿಸ್ತು ಮುಂತಾದವುಗಳಿಗೆ ಸಂಬಂಧಿಸಿದ ವಿಷಯಗಳಾಗಿರುವುದು ಅಪೇಕ್ಷಣೀಯ.

8. **ಭಾಷೆ :–** ಭಾಗವಹಿಸುವವರು, ಕನ್ನಡ, ಹಿಂದಿ ಅಥವಾ ಇಂಗ್ಲೀಷ್ ಅಥವಾ ಸಂಬಂಧಪಟ್ಟ ರಾಜ್ಯ/ಕೇಂದ್ರಾಡಳಿತ ಪ್ರದೇಶದ ಸಂಸದೀಯ ವ್ಯವಹಾರಗಳ ಇಲಾಖೆ, ಸಾರ್ವಜನಿಕ ಶಿಕ್ಷಣ ನಿರ್ದೇಶನಾಲಯ ನಿರ್ದಿಷ್ಟಪಡಿಸಬಹುದಾದಂಥ ಪ್ರಾದೇಶಿಕ ಭಾಷೆಯಲ್ಲಿ ಮಾತನಾಡಬಹುದು.

9. **ಯುವ ಸಂಸತ್ ನಡೆಯುವ ಸ್ಥಳ :–** ಯುವ ಸಂಸತ್ ಸ್ಪರ್ಧೆಯನ್ನು ಸಾಧ್ಯವಾದಷ್ಟು ಮಟ್ಟಿಗೆ ಒಂದು ಶಿಕ್ಷಣ ಸಂಸ್ಥೆಯು ತನ್ನದೇ ಆದ ಕಟ್ಟಡದಲ್ಲಿ ಅಥವಾ ಅವು ಇಚ್ಛಿಸುವಂಥ ಯಾವುದೇ ಇತರ ಸ್ಥಳದಲ್ಲಿ ನಡೆಸತಕ್ಕದ್ದು. ಸ್ಪರ್ಧೆಯಲ್ಲಿ ಭಾಗವಹಿಸುವ ಸಂಸ್ಥೆಗಳು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಗೆ ಹಾಗೂ ಪದವಿ ಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶನಾಲಯಕ್ಕೆ ಚರ್ಚೆಯ ವಿಷಯಗಳ ಮಾಹಿತಿಯೊಂದಿಗೆ ಸ್ಪರ್ಧೆ ನಡೆಸುವ ಸ್ಥಳದ ವಿವರಗಳನ್ನು ಸ್ಪರ್ಧೆಯ ದಿನಾಂಕಕ್ಕಿಂತ ಹತ್ತು ದಿನಗಳ ಮೊದಲೇ ತಿಳಿಸತಕ್ಕದ್ದು.

10. **ಬಹುಮಾನಗಳು :–** ಈ ಮುಂದಿನ ಬಹುಮಾನಗಳನ್ನು ಇರಿಸಲಾಗಿದೆ:–

(i) ಸ್ಪರ್ಧೆಯಲ್ಲಿ ಪ್ರಥಮ ಸ್ಥಾನ ಗಳಿಸಿದ ಸಂಸ್ಥೆಗೆ ಪಾರಿತೋಷಕ (ಸಂಸದೀಯ ಪಾರಿತೋಷಕ).

(ii) ಅರ್ಹತೆಯ ಆಧಾರದ ಮೇಲೆ ಸ್ಪರ್ಧೆಯಲ್ಲಿನ ಉತ್ತಮ ಗುಣಮಟ್ಟದ ಪ್ರದರ್ಶನಕ್ಕಾಗಿ ಮೊದಲ ಐದು ಸ್ಥಾನ ಪಡೆದ ಸಂಸ್ಥೆಗಳಿಗೆ ಟ್ರೋಫಿಗಳು.

(iii) ಪ್ರತಿಯೊಂದು ಸಂಸ್ಥೆಯಿಂದ ಭಾಗವಹಿಸಿರುವ ವಿದ್ಯಾರ್ಥಿಗಳಿಂದ ಆಯ್ಕೆ ಮಾಡಲಾದವರಿಗೆ ಪದಕಗಳು/ಕಪ್ಪುಗಳು/ಪುಸ್ತಕಗಳ ರೂಪದಲ್ಲಿ ವೈಯಕ್ತಿಕ ಬಹುಮಾನಗಳು. ಬಹುಮಾನಗಳ ಒಟ್ಟು ಸಂಖ್ಯೆಯು 80 ನ್ನು ಮೀರತಕ್ಕದ್ದಲ್ಲ.

(iv) ಇತರೆ ವೆಚ್ಚಗಳು.

**ಸೂಚನೆ :–** ಸಂಬಂಧಪಟ್ಟ ರಾಜ್ಯದ/ಕೇಂದ್ರಾಡಳಿತ ಪ್ರದೇಶದ ಸಂಸದೀಯ ವ್ಯವಹಾರಗಳ ಇಲಾಖೆ, ಸಾರ್ವಜನಿಕ ಶಿಕ್ಷಣ ನಿರ್ದೇಶನಾಲಯ ಸ್ಥಳೀಯ ಪರಿಸ್ಥಿತಿಗಳಿಗೆ ಅನುಸಾರವಾಗಿ ಮೇಲಿನ ನಾಲ್ಕು ಬಾಬುಗಳಿಗೆ ಸಂಬಂಧಿಸಿದ ವೆಚ್ಚವನ್ನು ವ್ಯತ್ಯಾಸಗೊಳಿಸಬಹುದು. ಭಾರತ ಸರ್ಕಾರದ ಸಂಸದೀಯ ವ್ಯವಹಾರಗಳ ಮಂತ್ರಾಲಯದಿಂದ ಮರುಸಂದಾಯವಾಗುವ ಗರಿಷ್ಠ ಮೊಬಲಗು ವಾರ್ಷಿಕವಾಗಿ, ಯೋಜನೆಯ 15ನೇ ಕಂಡಿಕೆಯಲ್ಲಿ ಹೇಳಿರುವುದನ್ನು ಮೀರತಕ್ಕದ್ದಲ್ಲ.

ಪಾರಿತೋಷಕವು ಪರ್ಯಾಯ ಪಾರಿತೋಷಕವಾಗಿದ್ದು ಅದನ್ನು ಸ್ಪರ್ಧೆಯಲ್ಲಿ ಪ್ರಥಮ ಸ್ಥಾನವನ್ನು ಹೊಂದಿದ ಸಂಸ್ಥೆಯು ಒಂದು ವರ್ಷದವರೆಗೆ ಉಳಿಸಿಕೊಳ್ಳಬಹುದಾಗಿದೆ. ಆದಾಗ್ಯೂ, ಒಂದೇ ಸಂಸ್ಥೆಯು ಮೂರು ನಿರಂತರ ವರ್ಷಗಳು ಪಾರಿತೋಷಕವನ್ನು ಗೆದ್ದರೆ ಆ ಸಂಸ್ಥೆಯೇ ಅದನ್ನು ಖಾಯಂ ಆಗಿ ಇಟ್ಟುಕೊಳ್ಳುವುದು.

ಅನುಬಂಧ–II ರಲ್ಲಿ ಇದ್ದಂತೆ ಒಂದು ಪ್ರಮಾಣ ಪತ್ರವನ್ನು ಸ್ಪರ್ಧೆಯಲ್ಲಿ ಭಾಗವಹಿಸಿದ ಎಲ್ಲ ಸಂಸ್ಥೆಗಳಿಗೆ ನೀಡತಕ್ಕದ್ದು.

ಅನುಬಂಧ–III ರಲ್ಲಿ ಇದ್ದಂತೆ ಒಂದು ಪ್ರಮಾಣ ಪತ್ರವನ್ನು ಸ್ಪರ್ಧೆಯಲ್ಲಿ ವೈಯಕ್ತಿಕ ಬಹುಮಾನವನ್ನು ಪಡೆದ ಎಲ್ಲಾ ವಿದ್ಯಾರ್ಥಿಗಳಿಗೆ ನೀಡತಕ್ಕದ್ದು.

**11. ತೀರ್ಪುಗಾರರ ಸಮಿತಿ :–** ಪ್ರತಿಯೊಂದು ಸಂಸ್ಥೆಗಳ ಮೌಲ್ಯಮಾಪನಕ್ಕಾಗಿ ತೀರ್ಪುಗಾರರ ಸಮಿತಿಯನ್ನು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಹಾಗೂ ಪದವಿ ಪೂರ್ವ ಶಿಕ್ಷಣ ನಿರ್ದೇಶನಾಲಯ ರಚಿಸತಕ್ಕದ್ದು ಹಾಗೂ ಅದರಲ್ಲಿ ಶಿಕ್ಷಣ ತಜ್ಞರು ವಿಧಾನಸಭೆ/ಪರಿಷತ್ತಿನ ಸದಸ್ಯರು ಮತ್ತು ಸಂಸದೀಯ ಸಂಸ್ಥೆಗಳನ್ನು ನಡೆಸುವುದಕ್ಕೆ ಸಂಬಂಧಪಟ್ಟ ಇತರರನ್ನು ಒಳಗೊಂಡಿರಬಹುದು. ಪದವಿ ಪೂರ್ವ ಶಿಕ್ಷಣ ನಿರ್ದೇಶನಾಲಯದ ಒಬ್ಬ ಅಧಿಕಾರಿಯು ಸಮಿತಿಯ ಪದನಿಮಿತ್ತ ಸದಸ್ಯರಾಗಿರತಕ್ಕದ್ದು.

**12. ಮೆರಿಟ್ ಪಟ್ಟಿಯನ್ನು ಸಿದ್ಧಪಡಿಸುವಾಗ ಪರಿಗಣಿಸಬೇಕಾದ ಅಂಶಗಳು :–** ಸ್ಪರ್ಧೆಯಲ್ಲಿ ಸಾಧನೆಯನ್ನು ನಿರ್ಧರಿಸುವಾಗ ಸಮಿತಿಯು, ಈ ಮುಂದಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡಿರತಕ್ಕದ್ದು.

**13. ಮರು ಪ್ರದರ್ಶನ :–** ಪ್ರತಿ ವರ್ಷದ ಸ್ಪರ್ಧೆಗಳ ಮುಕ್ತಾಯದ ಸಂದರ್ಭದಲ್ಲಿ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ ಹಾಗೂ ಪದವಿ ಪೂರ್ವ ಶಿಕ್ಷಣ ನಿರ್ದೇಶನಾಲಯ ನಿರ್ಧರಿಸಬಹುದಾದ ಸ್ಥಳ ಮತ್ತು ದಿನಾಂಕದಂದು ಸ್ಪರ್ಧೆಯ ಬಹುಮಾನ ವಿತರಣೆಯ ಸಮಾರಂಭದಲ್ಲಿ, ಸ್ಪರ್ಧೆಯಲ್ಲಿ ಪ್ರಥಮ ಸ್ಥಾನ ಗಳಿಸಿದ ಸಂಸ್ಥೆಯು ಮತ್ತೊಮ್ಮೆ ಪ್ರದರ್ಶನ ಮಾಡುವಂತೆ ಅಗತ್ಯಪಡಿಸಬಹುದು.

**14. ವರದಿ :–** ಪದವಿ ಪೂರ್ವ ಶಿಕ್ಷಣ ನಿರ್ದೇಶನಾಲಯ ಸ್ಪರ್ಧೆಯು ಮುಗಿದ ಮೇಲೆ ಅನುಬಂಧ–೫ಗಿ ರಲ್ಲಿ ನಿಯಮಿಸಲಾದ ನಮೂನೆಯಲ್ಲಿ, ಅದರಲ್ಲಿ ಮೆರಿಟ್ ಆಧಾರದ ಮೇಲೆ, ಮೊದಲನೇ ಐದು ಸ್ಥಾನ ಪಡೆದ ಶಾಲೆಗಳೂ ಸೇರಿದಂತೆ ಭಾಗವಹಿಸಿದ ಎಲ್ಲಾ ಶಾಲೆಗಳ ಸಂಖ್ಯೆಯನ್ನು ಸೂಚಿಸಿ ವೈಯಕ್ತಿಕ ಬಹುಮಾನಗಳ ಸಂಖ್ಯೆ ಮುಂತಾದವುಗಳನ್ನು ಒಳಗೊಂಡ ಒಂದು ವರದಿಯನ್ನು ತಯಾರಿಸತಕ್ಕದ್ದು. ವರದಿಯನ್ನು ಪದವಿ ಪೂರ್ವ ಶಿಕ್ಷಣ ನಿರ್ದೇಶನಾಲಯದ ಉಪ ನಿರ್ದೇಶಕರ ದರ್ಜೆಗಿಂತ ಕಡಿಮೆಯಲ್ಲದ ಪ್ರತಿನಿಧಿಯು ಸಹಿ ಮಾಡತಕ್ಕದ್ದು.

ನಿಯಮಿಸಲಾದ ನಮೂನೆಯಲ್ಲಿನ ವರದಿಯನ್ನು ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ, ಕರ್ನಾಟಕ ಸರ್ಕಾರ, ವಿಧಾನ ಸೌಧ, ಬೆಂಗಳೂರು ಇವರಿಗೆ ಕಳುಹಿಸತಕ್ಕದ್ದು.

**ಅನುಬಂಧ–II**

**ಕರ್ನಾಟಕ ಸರ್ಕಾರ**

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಹಾಗೂ ಪದವಿ ಪೂರ್ವ ಶಿಕ್ಷಣ ನಿರ್ದೇಶನಾಲಯ**

**"ಯುವ ಸಂಸತ್ ಸ್ಪರ್ಧೆ"**

(ಕಾಲೇಜಿನ ಹೆಸರು)

.............................................................................................................................................. ಕರ್ನಾಟಕ ಸರ್ಕಾರದ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಹಾಗೂ ಪದವಿ ಪೂರ್ವ ಶಿಕ್ಷಣ ನಿರ್ದೇಶನಾಲಯ ಇವರು ................ನೇ ವರ್ಷದಲ್ಲಿ ನಡೆಸಿದ "ಯುವ ಸಂಸತ್" ಸ್ಪರ್ಧೆಯಲ್ಲಿ ಭಾಗವಹಿಸಿದೆಯೆಂದು ಪ್ರಮಾಣೀಕರಿಸಲಾಗಿದೆ.

**ಸಕ್ಷಮ ಪ್ರಾಧಿಕಾರಿ**
**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಹಾಗೂ**
**ಕಾಲೇಜು ಪದವಿ ಪೂರ್ವ ಶಿಕ್ಷಣ ನಿರ್ದೇಶನಾಲಯ**

**ಅನುಬಂಧ–III**

**ಕರ್ನಾಟಕ ಸರ್ಕಾರ**

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಹಾಗೂ ಪದವಿ ಪೂರ್ವ ಶಿಕ್ಷಣ ನಿರ್ದೇಶನಾಲಯ**

**"ಯುವ ಸಂಸತ್ ಸ್ಪರ್ಧೆ"**

.......................................................................................ಪದವಿ ಪೂರ್ವ ಕಾಲೇಜಿನ ...................................................................................

ತರಗತಿಯ ವಿದ್ಯಾರ್ಥಿ/ವಿದ್ಯಾರ್ಥಿನಿಯಾದ....................................................................... ಅವರಿಗೆ ....................................................................

ವರ್ಷದಲ್ಲಿ ಕರ್ನಾಟಕ ಸರ್ಕಾರದ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ, ಬೆಂಗಳೂರು ಹಾಗೂ ಪದವಿ ಪೂರ್ವ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ಇವರ ನೇತೃತ್ವದಲ್ಲಿ ನಡೆಸಲಾದ "ಯುವ ಸಂಸತ್ ಸ್ಪರ್ಧೆ" ಯಲ್ಲಿನ ಅತ್ಯುತ್ತಮ ಸಾಧನೆಗೆ ........................................................................ ಬಹುಮಾನವನ್ನು ನೀಡಲಾಗಿದೆಯೆಂದು ಪ್ರಮಾಣೀಕರಿಸಲಾಗಿದೆ.

**ಸಕ್ಷಮ ಪ್ರಾಧಿಕಾರಿ**
**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಹಾಗೂ**
**ಪದವಿ ಪೂರ್ವ ಶಿಕ್ಷಣ ನಿರ್ದೇಶನಾಲಯ**

## ಅನುಬಂಧ–IV

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಹಾಗೂ ಪದವಿ ಪೂರ್ವ ಶಿಕ್ಷಣ ನಿರ್ದೇಶನಾಲಯವು**

**------------ ವರ್ಷದಲ್ಲಿ ನಡೆಸಿದ ಯುವ ಸಂಸತ್ ಸ್ಪರ್ಧೆಯ ವರದಿ/ಹಣಕಾಸು ವೆಚ್ಚದ ವಿವರ.**

| | | | |
|---|---|---|---|
| 1. | ಜಿಲ್ಲೆ / ಪ್ರಾದೇಶಿಕ ವ್ಯಾಪ್ತಿಯ ಹೆಸರು : | | |
| 2. | ಯುವ ಸಂಸತ್ ಸ್ಪರ್ಧೆಯನ್ನು ನಡೆಸಿದ ಶೈಕ್ಷಣಿಕ ವರ್ಷ : | | |
| 3. | ಯುವ ಸಂಸತ್ ಸ್ಪರ್ಧೆಯಲ್ಲಿ ಭಾಗವಹಿಸಿದ ಕಾಲೇಜುಗಳ ಸಂಖ್ಯೆ : | | |
| 4. | ಸ್ಪರ್ಧೆಯಲ್ಲಿ ಭಾಗವಹಿಸಿದ ವಿದ್ಯಾರ್ಥಿಗಳ ಒಟ್ಟು ಸಂಖ್ಯೆ : | | |
| 5. | ಸ್ಪರ್ಧೆಯಲ್ಲಿ ವೈಯಕ್ತಿಕ ಬಹುಮಾನಗಳನ್ನು ಪಡೆದ ವಿದ್ಯಾರ್ಥಿಗಳ ಸಂಖ್ಯೆ : | | |
| 6. | ಜಿಲ್ಲೆ / ಪ್ರಾದೇಶಿಕ ಮಟ್ಟದ ಸ್ಪರ್ಧೆಯಲ್ಲಿ ಮೊದಲ ಐದು ಸ್ಥಾನಗಳನ್ನು ಗಳಿಸಿದ ಕಾಲೇಜುಗಳ, ಮೆರಿಟ್, ಆಧಾರದ ಮೇಲೆ, ಹೆಸರು ಮತ್ತು ವಿಳಾಸ : | | |
| 7. | ಜಿಲ್ಲೆ / ಪ್ರಾದೇಶಿಕ ಮಟ್ಟದ ಪ್ರದೇಶಗಳ ಸ್ಪರ್ಧೆಯಲ್ಲಿ ಮಾಡಿರುವ ವೆಚ್ಚಗಳ ಒಟ್ಟು ಮೊಬಲಗು : | | |
| | **ವೆಚ್ಚಗಳ ಬಾಬು** | **ವೆಚ್ಚ ಮಾಡಿದ ಒಟ್ಟು ಮೊಬಲಗು** | |
| | **ವಿಷಯಾಭಿಮುಖ ಶಿಕ್ಷಣಕ್ಕಾಗಿ**<br>1.<br>2. | | |
| | **ಯುವ ಸಂಸತ್ ಸ್ಪರ್ಧೆಯ ವ್ಯವಸ್ಥೆಗಾಗಿ**<br>1.<br>2. | | |
| | **ಬಹುಮಾನ ವಿತರಣೆ ಸಮಾರಂಭಕ್ಕಾಗಿ**<br>1.<br>2. | | |
| 8. | ಸ್ಪರ್ಧೆ ಹಾಗೂ ಬಹುಮಾನ ವಿತರಣಾ ಸಮಾರಂಭದಲ್ಲಿ ತೆಗೆದ ಫೋಟೋಗಳು (5) | | |

1. ಮೇಲೆ ಸೂಚಿಸಿದಂತೆ ಕಾಲೇಜುಗಳಲ್ಲಿ ಯುವ ಸಂಸತ್ ಸ್ಪರ್ಧೆಯನ್ನು ನಡೆಸಲಾಯಿತು.
2. ವೆಚ್ಚದ ಮೂಲ ಓಚರುಗಳೊಂದಿಗೆ ತಾಳೆ ನೋಡಲಾಗಿದ್ದು ಅವುಗಳು ಸರಿಯಾಗಿದೆ ಎಂದು ಕಂಡುಬಂದಿದೆ ಹಾಗೂ ಅವುಗಳ ಪ್ರತಿಗಳನ್ನು ಲಗತ್ತಿಸಿದೆ.

– ಎಂದು ಈ ಮೂಲಕ ಪ್ರಮಾಣೀಕರಿಸಲಾಗಿದೆ :

(ಹೆಸರು)

ಪದನಾಮದ

(ಉಪ ನಿರ್ದೇಶಕರ ದರ್ಜೆಗಿಂತ ಕಡಿಮೆಯಿಲ್ಲದ ದರ್ಜೆಯ ಅಧಿಕಾರಿಗಳು ಸಹಿ ಮಾಡುವುದು)

ಜಿಲ್ಲೆ / ಪ್ರಾದೇಶಿಕ ವ್ಯಾಪ್ತಿಯ ಅಧಿಕಾರಿಯ ವಿಳಾಸ,

ದೂರವಾಣಿ ಸಂಖ್ಯೆ / ಇಮೇಲ್ ಐ.ಡಿ.

**ಸೂಚನೆ :–**

**ವಿಷಯಾಭಿಮುಖ ಶಿಕ್ಷಣ** ಎಂದರೆ ಯುವ ಸಂಸತ್ತನ್ನು ನಡೆಸುವುದರ ಪ್ರಭಾರದಲ್ಲಿರುವ ಶಿಕ್ಷಕರ/ಶಿಕ್ಷಣ ಅಧಿಕಾರಿಗಳ ಪ್ರಯೋಜನಕ್ಕಾಗಿ ನೋಡಲ್ ಪ್ರಾಧಿಕಾರಿಗಳು ನಡೆಸುವ ಒಂದು ಕೋರ್ಸು. ಭಾಗವಹಿಸುವವರಿಗೆ ಹಂಚುವ ಸಾಹಿತ್ಯ/ಲೇಖನ ಸಾಮಗ್ರಿಗಳ ರೂಪದಲ್ಲಿ ವೆಚ್ಚಗಳುಂಟಾಗುತ್ತವೆ.

**ಯುವ ಸಂಸತ್ ಸ್ಪರ್ಧೆಯ ವ್ಯವಸ್ಥೆ** ಎಂದರೆ, ಸ್ಪರ್ಧೆಯನ್ನು ನಡೆಸುವುದಕ್ಕೆ ವಹಿಸಿದ ವೆಚ್ಚ, ಇದು ಉಪಹಾರಕ್ಕೆ, ಭಾಗವಹಿಸುವ ವಿದ್ಯಾರ್ಥಿಗಳ ಸಾರಿಗೆ ವ್ಯವಸ್ಥೆಗೆ, ಬಹುಮಾನ/ಪಾರಿತೋಷಕ ಮುಂತಾದವುಗಳಿಗೆ ತಗಲಿದ ವೆಚ್ಚವನ್ನು ಒಳಗೊಳ್ಳುತ್ತದೆ.

**ಬಹುಮಾನ ವಿತರಣೆ ಸಮಾರಂಭ** ಎಂದರೆ, ರಾಜ್ಯ ಮಟ್ಟದ ಬಹುಮಾನ ವಿಜೇತರು ಮುಂತಾದವರಿಗೆ ಬಹುಮಾನಗಳು/ಷೀಲ್ಡ್‌ಗಳನ್ನು (ಪಾರಿತೋಷಕಗಳನ್ನು) ವಿತರಣೆ ಮಾಡುವುದಕ್ಕಾಗಿ ನಡೆಸಿದ ಸಮಾರಂಭ, ಇದು ಪ್ರತಿಭಾನ್ವಿತ ಶಾಲೆಗಳು ಮತ್ತು ವಿದ್ಯಾರ್ಥಿಗಳಿಗೆ ಪುಸ್ತಕಗಳು, ನೆನಪಿನ ಕಾಣಿಕೆಗಳು, ಪ್ರಮಾಣ ಪತ್ರಗಳು, ಷೀಲ್ಡ್‌ಗಳ (ಪಾರಿತೋಷಕಗಳು) ರೂಪದಲ್ಲಿ ಬಹುಮಾನ ಮುಂತಾದವುಗಳಿಗಾಗಿ ವಹಿಸಿದ ವೆಚ್ಚವನ್ನು ಒಳಗೊಳ್ಳುತ್ತದೆ.

* ವರದಿಯನ್ನು ಸ್ಪರ್ಧೆಯು ಮುಗಿದ ಒಂದು ವಾರದೊಳಗಾಗಿ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಇವರಿಗೆ ಕಳುಹಿಸತಕ್ಕದ್ದು.

**ಜಿಲ್ಲಾ ಮಟ್ಟದ ಹಾಗೂ ಪ್ರಾದೇಶಿಕ ಮಟ್ಟದ ಯುವ ಸಂಸತ್ ಸ್ಪರ್ಧೆಯ ಮಾರ್ಗಸೂಚಿಗಳು**

**1. ಜಿಲ್ಲಾ ಮಟ್ಟದ ಯುವ ಸಂಸತ್ ಸ್ಪರ್ಧೆಯ ವ್ಯವಸ್ಥೆ :–** ಸಂಬಂಧಪಟ್ಟ ಶೈಕ್ಷಣಿಕ ಜಿಲ್ಲೆಗಳ ಪದವಿ ಪೂರ್ವ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರು ತಮ್ಮ ಜಿಲ್ಲೆಯ ನೋಡಲ್ ಅಧಿಕಾರಿ ಹಾಗೂ ಇತರ ಸಿಬ್ಬಂದಿಯ ಸಮನ್ವಯದೊಂದಿಗೆ ಯುವಸಂಸತ್ ಸ್ಪರ್ಧೆಯನ್ನು ಸರ್ಕಾರ ನಿಗದಿಪಡಿಸಿದ ಕಾಲಮಿತಿಯೊಳಗೆ ವ್ಯವಸ್ಥಿತವಾಗಿ ನಡೆಸತಕ್ಕದ್ದು. ಸ್ಪರ್ಧೆಗಾಗಿ ಉತ್ತಮ ವೇದಿಕೆ, ಧ್ವನಿವರ್ಧಕ, ಹಾಗೂ ಸ್ಪರ್ಧೆಯಲ್ಲಿ ಭಾಗವಹಿಸುವ ವಿದ್ಯಾರ್ಥಿಗಳಿಗೆ ಉಪಹಾರ, ಸ್ಪರ್ಧಾ ವಿಜೇತರಿಗೆ ಬಹುಮಾನ, ಮುಂತಾದವನ್ನು ಪ್ರತಿ ಜಿಲ್ಲೆಗೆ ನೀಡಲಾಗುವ ಅನುದಾನದಿಂದ ಏರ್ಪಾಡು ಮಾಡತಕ್ಕದ್ದು.

**2. ಯುವ ಸಂಸತ್ ಸ್ಪರ್ಧೆಗಳಿಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವ ವಿಧಾನ :–** ಜಿಲ್ಲಾ ಮಟ್ಟದ ಯುವ ಸಂಸತ್ ಸ್ಪರ್ಧೆಗಳಿಗೆ ಕರ್ನಾಟಕ ರಾಜ್ಯದ ಮಾನ್ಯತೆ ಪಡೆದ ಎಲ್ಲಾ ಪದವಿ ಪೂರ್ವ ಕಾಲೇಜುಗಳ ವಿದ್ಯಾರ್ಥಿಗಳು ಸ್ಪರ್ಧೆಯಲ್ಲಿ ಭಾಗವಹಿಸುವ ಅರ್ಹತೆ ಹೊಂದಿರುವುದರಿಂದ ಸುಮಾರು 60 ರಿಂದ 90 ವಿದ್ಯಾರ್ಥಿಗಳು ಜಿಲ್ಲಾ ಮಟ್ಟದ ಸ್ಪರ್ಧೆಯಲ್ಲಿ ಭಾಗವಹಿಸುವಂತೆ ಅವಕಾಶ ನೀಡಬೇಕು. ಇದಕ್ಕಾಗಿ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವಾಗ ಈ ಮುಂದೆ ಹೇಳಿದ ಅರ್ಹತೆಗಳನ್ನು ಸಾಮಾನ್ಯವಾಗಿ ಪರಿಗಣಿಸಬೇಕು.

1) ಚರ್ಚಿಸುವ ಸಾಮರ್ಥ್ಯವಿರುವ ವಿದ್ಯಾರ್ಥಿಗಳು.

2) ನಮ್ಮ ದೇಶದ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸಮಸ್ಯೆಗಳ ಬಗ್ಗೆ ಸಾಕಷ್ಟು ಚೆನ್ನಾಗಿ ತಿಳಿದುಕೊಂಡ ವಿದ್ಯಾರ್ಥಿಗಳು.

3) ತಮ್ಮ ತಮ್ಮ ತರಗತಿಗಳಲ್ಲಿ ಉತ್ತಮ ಮೆರಿಟ್ ಪಡೆದಿರುವ ವಿದ್ಯಾರ್ಥಿಗಳು.

4) ಮುಖಂಡತ್ವದ ಗುಣಗಳಿರುವ ಮತ್ತು ಪಠ್ಯೇತರ ಚಟುವಟಿಕೆಗಳಲ್ಲಿ ಆಸಕ್ತಿ ಇರುವ ವಿದ್ಯಾರ್ಥಿಗಳು.

5) ಪ್ರಥಮ ವರ್ಷದ ಹಾಗೂ ದ್ವಿತೀಯ ವರ್ಷದ ಪದವಿ ಪೂರ್ವ ಶಿಕ್ಷಣದಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು.

ಪ್ರತಿ ವರ್ಷವೂ ಹೊಸ ವಿದ್ಯಾರ್ಥಿಗಳ ಗುಂಪುಗಳಿಗೆ ಆದ್ಯತೆ ನೀಡಿ, ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ಭಾಗವಹಿಸುವಂತೆ ನೋಡಿಕೊಳ್ಳಬೇಕೆಂದು ಮತ್ತು ಪ್ರಶ್ನೋತ್ತರ ಅವಧಿಯಲ್ಲಿ ಮತ್ತು ಇತರ ಶಾಸನ–ಕಲಾಪಗಳ ಅವಧಿಯಲ್ಲಿ ಆಯ್ಕೆ ಮಾಡಿದ ವಿಷಯಗಳಿಗೆ ಸಂಬಂಧಪಟ್ಟ ಅಂಕಿ ಅಂಶಗಳನ್ನು ಸಂಗ್ರಹಿಸುವಂತೆ ಅವರಿಗೆ ಸೂಚಿಸಬೇಕು. ವಿದ್ಯಾರ್ಥಿನಿಯರಿಗೂ ಯುವ ಸಂಸತ್ತಿನಲ್ಲಿ ಭಾಗವಹಿಸಲು ಸಮಾನ ಅವಕಾಶ ನೀಡತಕ್ಕದ್ದು.

**3. ಸ್ಪರ್ಧೆ ನಡೆಸುವ ವಿಧಾನ :–** ಕೇಂದ್ರ ಸರ್ಕಾರವು ಒದಗಿಸಿರುವ ಮಾದರಿ ಪ್ರಶ್ನೆಗಳ ಪಟ್ಟಿ ಇದನ್ನು ಅನುಬಂಧ–I, ಕಾರ್ಯಕಲಾಪಗಳ ಒಂದು ಮಾದರಿ ಪಟ್ಟಿ ಅನುಬಂಧ–II, 1998ರ ಕೇಂದ್ರ ಸರ್ಕಾರದ ಯುವ ಸಂಸತ್ ಸ್ಪರ್ಧೆಯ ಒಂದು ಟಿಪ್ಪಣಿ ಅನುಬಂಧ–III, ರಲ್ಲಿ ಒದಗಿಸಲಾಗಿದೆ. ಇದರೊಂದಿಗೆ ಲೋಕಸಭೆ ಹಾಗೂ ರಾಜ್ಯ ಸಭೆಗಳ ವೆಬ್‌ಸೈಟ್ http://loksabha.gov.in ಹಾಗೂ http://rajyasabha.gov.in ಇವುಗಳಲ್ಲಿ ಲಭ್ಯವಿರುವ ಮಾಹಿತಿಗಳನ್ನು ಪಡೆದು ಸ್ಪರ್ಧೆಗೆ ವಿದ್ಯಾರ್ಥಿಗಳನ್ನು ಸಿದ್ಧಪಡಿಸಬಹುದು.

**4. ಪ್ರಾದೇಶಿಕ ಮಟ್ಟದ ಸ್ಪರ್ಧೆಗಳು :–** ಜಿಲ್ಲಾ ಮಟ್ಟದ ಸ್ಪರ್ಧೆಗಳನ್ನು ಉಪ ನಿರ್ದೇಶಕರ ನೇತೃತ್ವದಲ್ಲಿ ವಿಷಯ ತಜ್ಞರು ಹಾಗೂ ವಿಧಾನ ಸಭೆ/ವಿಧಾನ ಪರಿಷತ್ತು/ಜಿಲ್ಲಾ ಪಂಚಾಯತ್ ಅಧ್ಯಕ್ಷ/ಸದಸ್ಯರ ಮಾರ್ಗದರ್ಶನದಲ್ಲಿ ನಡೆಸತಕ್ಕದ್ದು. ಪ್ರತಿಯೊಂದು ಜಿಲ್ಲೆಯಿಂದ ಅಂಕಗಳ ಆಧಾರದ ಮೇಲೆ ಆಯ್ಕೆಯಾದ ಪ್ರಥಮ ಐದು ವಿದ್ಯಾರ್ಥಿಗಳನ್ನು ಪ್ರಾದೇಶಿಕ ಮಟ್ಟದ ಸ್ಪರ್ಧೆಗೆ ಅರ್ಹ ಅಭ್ಯರ್ಥಿಗಳೆಂದು ಪರಿಗಣಿಸಲಾಗುವುದು.

ಪ್ರಾದೇಶಿಕ ಮಟ್ಟದ ಸ್ಪರ್ಧೆಗಳಲ್ಲಿ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಜಂಟಿ ಕಾರ್ಯದರ್ಶಿ ಹುದ್ದೆಗೆ ಕಡಿಮೆ ಇಲ್ಲದ ಅಧಿಕಾರಿಗಳು ತೀರ್ಪುಗಾರರಾಗಿ ಭಾಗವಹಿಸುವರು. ಕಾಲೇಜು ಶಿಕ್ಷಣ ಇಲಾಖೆಯ ಉಪ ನಿರ್ದೇಶಕರ ದರ್ಜೆಗೆ ಕಡಿಮೆ ಇಲ್ಲದ ಅಧಿಕಾರಿಗಳು ಹಾಗೂ ವಿಧಾನ ಸಭೆ/ ಪರಿಷತ್ತಿನ ಸದಸ್ಯರು ತೀರ್ಪುಗಾರರಾಗಿರುವರು. ಪ್ರಾದೇಶಿಕ ಮಟ್ಟದಲ್ಲಿ ಆಯ್ಕೆಯಾದ ಒಟ್ಟು 60 ವಿದ್ಯಾರ್ಥಿಗಳನ್ನು (ಅಂಕಗಳ ಆಧಾರದ ಮೇಲೆ) ರಾಜ್ಯ ಮಟ್ಟದ ಸ್ಪರ್ಧೆಗೆ ಆಹ್ವಾನಿಸಲಾಗುವುದು.

**5. ರಾಜ್ಯ ಮಟ್ಟದ ಸ್ಪರ್ಧೆಗಳು :–** ರಾಜ್ಯ ಮಟ್ಟದ ಸ್ಪರ್ಧೆಗಳನ್ನು ಜನವರಿ ತಿಂಗಳ ಮೊದಲ ವಾರದಲ್ಲಿ ಅಥವಾ ಎರಡನೇ ವಾರದಲ್ಲಿ ಬೆಂಗಳೂರಿನಲ್ಲಿ ನಡೆಸಲಾಗುವುದು. ಸದರಿ ಸ್ಪರ್ಧೆಗೆ ಆಯ್ಕೆಯಾದ ವಿದ್ಯಾರ್ಥಿಗಳಿಗೆ ಮಾಹಿತಿ ಮತ್ತು ಮಾರ್ಗದರ್ಶನಗಳನ್ನು ಸೂಕ್ತ ಸಮಯದಲ್ಲಿ ನೀಡಲಾಗುವುದು.

ಪಿ.ಆರ್. 1886